ಶ್ರೀರಾಘವೇಂದ್ರತೀರ್ಥವಿರಚಿತ

# ಷಟ್ಪ್ರಶ್ನೋಪನಿಷತ್‌ಖಂಡಾರ್ಥಃ



ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ - 39




ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ - 29

ಕಮಲೇಶ ಕುಸುಮ - 19

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಷಟ್‌ಪ್ರಶ್ನೋಪನಿಷತ್‌ಖಂಡಾರ್ಥಃ

ಅನುವಾದಕರು :

ವಿದ್ವಾನ್ ಕೆ. ಸತ್ಯನಾರಾಯಣಾಚಾರ್ಯ

ಪ್ರಕಾಶಕರು :

ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು - ಬೆಂಗಳೂರು

2010

# ಸಂಸ್ಥೆಯ ಸಾಮ್ರಾಟ್ ಪೋಷಕರು




ಪೊಡವಿಗೊಡೆಯರಾದ ಶ್ರೀಗುರುರಾಯರನ್ನು ಹೃದಯಗುಡಿಯಲ್ಲಿ ಅಡಗಿಸಿ ಎಂದೂ ಮಾಸದ ಮೃದು ಮಧುರ ಮುಗ್ಧ ನಗೆಯನ್ನು ಹೊರಸೂಸುತ್ತ ತಮ್ಮ ಅಮೃತಹಸ್ತದ ಹಿಡಿಯಿಂದ ಮಂತ್ರಾಕ್ಷತೆಯನ್ನು ನೀಡುತ್ತಾ ತೇಡಿಬಂದು ಬೇಡಿದವರ ಇಷ್ಟಾರ್ಥಗಳನ್ನು ಈಡೇರಿಸುತ್ತಾ ಅನಂತ ಭಕ್ತಸಮೂಹದಿಂದ

**'ನಡೆದಾಡುವ ರಾಯರು'** ಎಂದು

ಪ್ರಾತಃಸ್ಮರಣೀಯರಾಗಿ ಭಕ್ತಿ ಗೌರವದಿಂದ ಪೂಜಿಸಲ್ಪಡುತ್ತಿರುವ

**'ಶ್ರೀ ರಾಯರ ಕರುಣೆಯ ಕಂದರಾದ' ಪರಮಪೂಜ್ಯ**

**108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥಸಮರ್ಪಣೆ

ಭಾಷ್ಯಕಾರರಾಗಿ, ಟೀಕಾಕಾರರಾಗಿ, ಟಿಪ್ಪಣಿಕಾರರಾಗಿ,
ಶ್ರೀಮನ್ಮಧ್ವಸಿದ್ಧಾಂತವೆಂಬ ತತ್ತ್ವಜ್ಞಾನ ಕಲ್ಪವೃಕ್ಷವನ್ನು
ತಮ್ಮ ಅಪೂರ್ವ, ಅಸದೃಶ, ಶ್ರೇಷ್ಠ ಗ್ರಂಥಗಳಿಂದ
ಫಲಭರಿತವನ್ನಾಗಿಸಿ, ಆ ಪರಿಮಳಯುಕ್ತವಾದ
ಸತ್ಫಲದ ಸವಿಜೇನಿನ ತತ್ತ್ವಸುಧೆಯನ್ನು ವಸುಧೆಯೊಳು
ಸುಧೀಜನರು ಆಸ್ವಾದಿಸಿ ಆತ್ಮೋದ್ಧಾರದ ಅನುಭವವನ್ನು
ಹೊಂದಿ, ಆನಂದಿಸುವಂತೆ ಅನುಗ್ರಹಿಸಿ
ಆಶೀರ್ವದಿಸುತ್ತಿರುವ ಅತ್ಯಂತ ದಯಾಳುಗಳಾದ
ಜಗದ್ಗುರು ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ
ಇಪತ್ತೈದು ಶ್ರೇಷ್ಠಗ್ರಂಥಗಳಿಂದ ಸಮಲಂಕೃತವಾದ "ಶ್ರೀ ಗುರುರಾಜಸಂಪುಟಮ್"
ಎಂಬ ಪವಿತ್ರವಾದ ಗ್ರಂಥಪುಷ್ಪವನ್ನು
ಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ 75ನೇ ವರ್ಷದ
ವರ್ಧಂತ್ಯುತ್ಸವದ ಸವಿನೆನಪಿಗಾಗಿ ಹಾಗೂ
ಶ್ರೀಸುಯಮಿ ರಾಘವೇಂದ್ರ ಸಂಶೋಧನ ಕೇಂದ್ರದ
ಪಂಚಾದಶ ಸಂಸ್ಥಾಪನಾ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀರಾಯರ ಪರಮಪಾವನ ಚರಣಕಮಲಗಳಲ್ಲಿ
ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಸದ್ಭಕ್ತಿ-ಶ್ರದ್ಧಾದರ
ನಮನಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಗುರುರಾಜರ ಚರಣಸೇವಕರು
ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

ದಿನಾಂಕ 23-09-2010
ಮಂತ್ರಾಲಯಂ

ಆಚಾರ್ಯ ಶ್ರೀಮಧ್ವರು





ಶ್ರೀಜಯತೀರ್ಥರು

## ಸಂಶೋಧನ ಕೇಂದ್ರದ ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಸಾಮ್ರಾಟ್ ಪೋಷಕರು : ಶ್ರೀ ಸುಶಮೀಂದ್ರತೀರ್ಥರು ಹಾಗೂ
ಶ್ರೀ ಸುಯತೀಂದ್ರತೀರ್ಥರು

## ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು


ರಾಜಾ. ಶ್ರೀ. ವೇಣುಗೋಪಾಲಾಚಾರ್ಯ


ರಾಜಾ. ಶ್ರೀ. ಗುರುರಾಜಾಚಾರ್ಯ


ರಾಜಾ. ಶ್ರೀ. ಲಕ್ಷ್ಮೀನಾರಾಯಣಾಚಾರ್ಯ


ಡಾ. ಹುಲಿ. ಕೃ. ವೇದವ್ಯಾಸಾಚಾರ್ಯ

ಸಂಶೋಧನ ಕೇಂದ್ರದ ಸಂಸ್ಥಾಪಕರು

"ಶ್ರೀರಾಘವೇಂದ್ರಗುರುವಂಶಭೂಷಣಂ"

ರಾಜಾ. ಶ್ರೀ. ಗುರುರಾಜಾಚಾರ್ಯ



॥ ಶ್ರೀಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಹಂಸನಾಮಕ ಪರಮಾತ್ಮಪ್ರವರ್ತಿತ ಜ್ಞಾನಪೀಠಾಧ್ಯಕ್ಷರಾದ
ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ 108 ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರ
ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ 108 ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರ
ವರಕುಮಾರಕರಾದ

**ಪರಮಪೂಜ್ಯ ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ**

75 ನೇ ವರ್ಷದ ವರ್ಧಂತ್ಯುತ್ಸವದ ಸವಿನೆನಪಿಗಾಗಿ ಪ್ರಕಾಶಿಸಲ್ಪಟ್ಟ

# ಶ್ರೀಗುರುರಾಜರ ಗ್ರಂಥರತ್ನ

*॥ ಜೀಯಾತ್ ಶ್ರೀಸುಯತೀಂದ್ರತೀರ್ಥಸಂಯಮಿಮಣೇ ವೇದಾಂತರಾಜ್ಯೇ ಚಿರಮ್ ॥*

॥ ಶ್ರೀಃ ॥

॥ ಶ್ರೀಮೂಲರಾಮೋ ವಿಜಯತೇತರಾಮ್ ॥

॥ ಶ್ರೀಗುರುರಾಜೋ ವಿಜಯತೇ ॥

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಷಟ್‌ಪ್ರಶ್ನೋಪನಿಷತ್‌ಖಂಡಾರ್ಥಃ

ಕನ್ನಡಾನುವಾದ :

**ವಿದ್ವಾನ್ ಕೆ. ಸತ್ಯನಾರಾಯಣಾಚಾರ್ಯ**

ಶ್ರೀರಂಗವಿಠ್ಠಲಂ ನತ್ವಾ ಸರ್ವಜ್ಞಾದಿಗುರೂನಪಿ ।
ಷಟ್‌ಪ್ರಶ್ನಾಖ್ಯೋಽಪನಿಷದಷ್ಟೀಕೋಕ್ತಾರ್ಥೋ ನಿಗದ್ಯತೇ ॥

ಶ್ರೀರಂಗವಿಠ್ಠಲನ್ನು ನಮಿಸಿ ಹಾಗೂ ಸರ್ವಜ್ಞಾಚಾರ್ಯರಾದ ಮಧ್ವಾಚಾರ್ಯರನ್ನು, ಸರ್ವಜ್ಞಕಲ್ಪ ಟೀಕಾ-ಚಾರ್ಯರನ್ನು, ಗುರುಸ್ಥಾನೀಯರಾದ ಎಲ್ಲಾ ಗುರುಗಳನ್ನೂ ನಮಿಸಿ ಷಟ್‌ಪ್ರಶ್ನ ಉಪನಿಷತ್ತಿನ ಟೀಕಾದಲ್ಲಿ ಉಕ್ತವಾದ ಅರ್ಥವನ್ನು ಇಲ್ಲಿ ಹೇಳಲ್ಪಡುತ್ತದೆ.

**ಇಹ ಖಲು ಸಂಸಾರಪಾರಾವಾರೇ ನಿಪತಿತಮಧಿಕಾರಿಣಂ ಜನಂ ಜನನೀ ತನಯಮಿವ ಪರ-ಮಾತ್ಮತತ್ವಜ್ಞಾನಪ್ಲವೇನ ಉದ್ಧರ್ತುಂ ಪ್ರವೃತ್ತೇಯಮ್ ಆಥರ್ವಣೀ ಬ್ರಾಹ್ಮಣೋಪನಿಷತ್ । ಅಸ್ಯಾ ಉಪನಿಷದೋ ವಾಸುದೇವೋ ಮುಖ್ಯತಯಾ ಪ್ರತಿಪಾದ್ಯೋ ದೇವತಾ । ಪ್ರಾಣಾದಯಸ್ತು ತಚ್ಛೇಷ-ತಯಾ ತಥೇತಿ ಜ್ಞೇಯಮ್ । ಪಿಪ್ಪಲಾದಾದಯಃ ಋಷಯಃ ।**

**ಛಂದಸ್ತು ಕ್ವಚಿದಕ್ಷರಪರಿಗಣನಯಾ ಜ್ಞೇಯಮ್ । ಅತ್ರ ಸುಕೇಶಾ ಇತ್ಯಾದಿಕಾಖ್ಯಾಯಿಕಾ ವಿದ್ಯಾಪ್ರಶಂಸಯಾ ಶ್ರೋತೄಣಾಂ ಶ್ರದ್ಧಾಜನನಾರ್ಥಾ । ಏವಂ ಕಿಲ ಮಹದ್ಭಿಃ ಭಾರದ್ವಾಜಪ್ರಭೃತಿಭಿರಪಿ ಇಯಂ ವಿದ್ಯಾ ಸಂವತ್ಸರಬ್ರಹ್ಮಚರ್ಯಾದಿನಾ ಲಬ್ಧಾ । ಅತೋಽತಿಪ್ರಶಸ್ತತರಾ । ಅತೋ ಅಸ್ಮಾಭಿರಪಿ ಏವಂವಿಧೈಃ ಭಾವ್ಯಮಿತಿ । ಸ್ಮರ್ಯತೇ ಹಿ ಶ್ರದ್ಧಾದೀನಾಂ ತತ್ವಜ್ಞಾನಹೇತುತ್ವಂ 'ಶ್ರದ್ಧಾವಾನ್‌ಲಭತೇ ಜ್ಞಾನಮ್' ಇತ್ಯಾದಿನಾ । ಅತ್ರೇಯಮಕ್ಷರಯೋಜನಾ ।**

ಈ ಜಗತ್ತಿನಲ್ಲಿ ಜನನ ಮರಣ ರೂಪ ಸಂಸಾರ ಸಾಗರದಲ್ಲಿ ಮುಳಿಗಿರುವ ಮೋಕ್ಷಕ್ಕೆ ಅಧಿಕಾರಜ್ಞರನ್ನು ಪರಮಾತ್ಮನ ತತ್ವಜ್ಞಾನವೆಂಬ ನಾವೆಯಿಂದ ಉದ್ಧರಿಸಲು ಪ್ರವೃತ್ತವಾಗಿರುವ ಅಥರ್ವಣವೇದದ ಗೋಪಥಬ್ರಾಹ್ಮಣದ ಪಿಪ್ಪಲಾದ

ಶಾಖೆಗೆ ಸೇರಿದ ಪ್ರಶ್ನೋಪನಿಷದ್. ಈ ಉಪನಿಷತ್‌ಗೆ ಮುಖ್ಯ ಪ್ರತಿಪಾದ್ಯ ದೇವತಾ ವಾಸುದೇವರೂಪಿ ನಾರಾಯಣನೇ ಅಮುಖ್ಯವಾಗಿ ಮುಖ್ಯ ಪ್ರಾಣಾದಿ ದೇವತೆಗಳು. ಪಿಪ್ಪಲಾದ ಮೊದಲಾದವರು ಋಷಿಗಳು, ಅಕ್ಷರಗಣನೆಯಾದ ಛಂದಸ್ಸನ್ನು ಯಥಾ ಯೋಗ್ಯವಾಗಿ ತಿಳಿದುಕೊಳ್ಳಬೇಕು. ಇಲ್ಲಿ ಸುಕೇಶಾ ಇತ್ಯಾದಿಗಳ ಕಥಾನಿರೂಪಣವು ವಿದ್ಯಾ ಪ್ರಶಂಸೆಗಾಗಿ ಹಾಗೂ ಅಧ್ಯಯನ ಮಾಡುವ ಶ್ರೋತೃಗಳ ಶ್ರದ್ಧೆಯನ್ನು ಹುಟ್ಟಿಸುವುದಕ್ಕಾಗಿ, ಮಹಾತ್ಮರಾದ ಭಾರದ್ವಾಜರೇ ಮೊದಲಾದವರಿಗೆ ಒಂದು ಸಂವತ್ಸರ ಬ್ರಹ್ಮಚರ್ಯೆಯಲ್ಲಿದ್ದು ಈ ಉಪನಿಷತ್ತಿನ ಅಧ್ಯಯನಕ್ಕೆ ಅಧಿಕಾರಿತ್ವ ಸಂಪಾದಿಸಿದ್ದಾರೆ. ಆದ್ದರಿಂದ ಅತಿಪ್ರಶಸ್ತವಿದ್ಯೆ. ಈ ಕಾರಣದಿಂದ ನಮಗೂ ಈ ವಿಧವಾಗಿ ವಿದ್ಯಾಪ್ರಾಪ್ತಿಯಾಗಲಿ ಎಂದು ಭಾವಿಸಬೇಕು. ತತ್ತ್ವಜ್ಞಾನಕ್ಕೆ ಶ್ರದ್ಧಾದಿಗಳೇ ಕಾರಣ 'ಶ್ರದ್ಧಾವಾನ್ ಲಭತೇ ಜ್ಞಾನಮ್' ಇತ್ಯಾದಿಗಳನ್ನು ಸ್ಮರಿಸಬೇಕು.

# ಅಥ ಪ್ರಥಮಪ್ರಶ್ನಃ

**ಸುಕೇಶಾ ಚ ಭಾರದ್ವಾಜಃ ಶೈಬ್ಯಶ್ಚ ಸತ್ಯಕಾಮಃ ಸೌರ್ಯಾಯಣೀ ಚ ಗಾರ್ಗ್ಯಃ, ಕೌಸಲಶ್ಚ ಆಶ್ವಲಾಯನಃ ಭಾರ್ಗವೋ ವೈದರ್ಭಿಃ, ಕಬಂಧೀ ಕಾತ್ಯಾಯನಃ । ತೇ ಹೈತೇ ಬ್ರಹ್ಮಪರಾಃ ಬ್ರಹ್ಮನಿಷ್ಠಾಃ ಪರಂಬ್ರಹ್ಮ ಅನ್ವೇಷಮಾಣಾಃ ಏಷ ಹ ವೈ ತತ್ಸರ್ವಂ ವಕ್ಷ್ಯತಿ ಇತಿ ತೇ ಹ ಸಮಿತ್ಪಾಣಯಃ ಭಗವಂತಂ ಪಿಪ್ಪಲಾದಂ ಉಪಸನ್ನಾಃ ॥ 1 ॥**

ಸುಕೇಶಾ ನಾಮತಃ ಭಾರದ್ವಾಜಸ್ಯ ಅಪತ್ಯಂ ಭಾರದ್ವಾಜಃ । ಶಿಬೇಃ ಅಪತ್ಯಂ ಶೈಬ್ಯಃ ಸತ್ಯಕಾಮೋ ನಾಮತಃ । ಸೂರ್ಯಸ್ಯ ಅಪತ್ಯಂ ಸೌರ್ಯಃ, ತದಪತ್ಯಂ ಸೌರ್ಯಾಯಣೀ । ದೀರ್ಘಃ ಸುಲೋಪಶ್ಚ ಛಾಂದಸ ಇತಿ ಸ ಏವ ಸೌರ್ಯಾಯಣೀ । ಗರ್ಗಸ್ಯ ಗೋತ್ರೋ ಗಾರ್ಗ್ಯಃ । ಕೌಸಲ್ಯೋ ನಾಮತಃ । ಕೋಸಲಾಯಾಂ ಭವೋ ವಾ । ಅಶ್ವಲಸ್ಯ ಅಪತ್ಯಂ ಆಶ್ವಲಾಯನಃ । ಭೃಗೋಃ ಅಪತ್ಯಂ ಭಾರ್ಗವಃ । ವಿದರ್ಭೇಷು ಭವೋ ವೈದರ್ಭಿಃ । ಕಬಂಧೀ ನಾಮತಃ । ಕತ್ಯಸ್ಯ ಅಪತ್ಯಂ ಕಾತ್ಯಾಯನಃ । ಇತರೇತರಯೋಗೇ ಚಶಬ್ದಾಃ । ತ ಏತೇ ಹ ಕಿಲ ಬಹ್ಮಪರಾಃ ವೇದಾಭ್ಯಾಸೇ ತಾತ್ಪರ್ಯವಂತಃ । ಬ್ರಹ್ಮನಿಷ್ಠಾಃ । ತದುಕ್ತಾನುಷ್ಠಾನಶೀಲಾಶ್ಚ ಮುನಯಃ ಕದಾಚಿತ್ ಕ್ವಚಿತ್ ಸಮವೇತಾಃ । ಪರಂಬ್ರಹ್ಮ ವಾಸುದೇವಂ ಅನ್ವೇಷಮಾಣಾ ಜಿಜ್ಞಾಸವೋ ಬಭೂವುರಿತಿ ಶೇಷಃ । ಬ್ರಹ್ಮಪರಾ ಇತ್ಯಾದಿ ಬ್ರಹ್ಮಜಿಜ್ಞಾಸಾಧಿಕಾರಸಂಪತ್ತಿಕಥನಮ್ ॥ 1 ॥

ತತಸ್ತೇ ಕಿಲೈಷ ಪಿಪ್ಪಲಾದಃ ಯದ್ವಯಂ ಪೃಚ್ಛಾಮಃ ತತ್ಸರ್ವಂ ವಕ್ಷ್ಯತೀ ತಸ್ಮಾದೇನಂ ಗಚ್ಛಾಮಃ ಇತಿ ನಿಶ್ಚಿತ್ಯ ಸಮಿತ್ಪಾಣಯೋ ಭೂತ್ವಾ ಭಗವಂತಂ ಪೂಜ್ಯಂ ಪಿಪ್ಪಲಾದಮುಪಸನ್ನಾಃ, ತತ್ಸಮೀಪಂ ಪ್ರಾಪ್ತಾಃ । ವೈಶಬ್ದಃ ಪಿಪ್ಪಲಾದಸ್ಯ ಪ್ರಶ್ನಪ್ರತಿವಚನಸಾಮರ್ಥ್ಯದ್ಯೋತಕಃ ॥

ಭರದ್ವಾಜರ ಮಗನಾದ ಸುಕೇಶಾ ಮುನಿಯು, ಶಿಬಿಯ ಮಗನಾದ ಸತ್ಯಕಾಮ ಮುನಿಯು, ಸೂರ್ಯನ ಪೌತ್ರನಾದ ಗರ್ಗವಂಶದಲ್ಲಿ ಹುಟ್ಟಿದ ಗಾರ್ಗ್ಯ ಮುನಿಯು, ಆಶ್ವಲಾಯನನ ಮಗನಾದ ಕೋಸಲ ದೇಶದಲ್ಲಿ ಹುಟ್ಟಿದ ಕೌಸಲ್ಯ ಮುನಿಯು, ಭೃಗುವಿನ ಮಗನಾದ ವಿದರ್ಭದೇಶದವನಾದ ವೈದರ್ಭಿ ಮುನಿಯು, ಕತ್ಯರ ಮಗನಾದ ಕಬಂಧೀ ಮುನಿಯು, ಎಂದು ಆರು ಮಂದಿ ವೇದಾಭ್ಯಾಸದಲ್ಲಿ ಆಸಕ್ತರಾದ, ವೇದೋಕ್ತಕರ್ಮಾಚರಣ ಸಂಪನ್ನರಾದ ಋಷಿಗಳು ಒಂದು ಸಲ ಎಲ್ಲರೂ ಒಟ್ಟುಗೂಡಿ ವಾಸುದೇವರೂಪಿಯಾದ ಪರಬ್ರಹ್ಮನನ್ನು ತಿಳಿಯುವ ಇಚ್ಛೆಯುಳ್ಳವರಾದರು. ಈ ಪಿಪ್ಪಲಾದರು ನಾವು ಕೇಳುವ ವಿಷಯವನ್ನೆಲ್ಲಾ ಹೇಳುವರು ಎಂದು ನಿಶ್ಚಯಿಸಿಕೊಂಡು, ಸಮಿತ್ತನ್ನು ಕೈಯಲ್ಲಿ ಹಿಡಿದುಕೊಂಡು ಪೂಜ್ಯರಾದ ಪಿಪ್ಪಲಾದರ ಸಮೀಪಕ್ಕೆ ಬಂದರು.

**ತಾನ್ ಹ ಸ ಋಷಿರುವಾಚ । ಭೂಯ ಏವ ತಪಸಾ ಬ್ರಹ್ಮಚರ್ಯೇಣ**
**ಶ್ರದ್ಧಯಾ ಸಂವತ್ಸರಂ ಸಂವತ್ಸ್ಯಥಃ ಯಥಾಕಾಮಂ ಪ್ರಶ್ನಾನ್ ಪೃಚ್ಛತ ।**
**ಯದಿ ವಿಜ್ಞಾಸ್ಯಾಮಃ ಸರ್ವಂ ಹ ವೋ ವಕ್ಷ್ಯಾಮ ಇತಿ ॥ 2 ॥**

**ತಾನಾಗತಾನ್ ಹ ಕಿಲ ಸ ಋಷಿಃ ಪಿಪ್ಪಲಾದ ಉವಾಚ- ಕಿಮಿತಿ । ಯದ್ಯಪಿ ಯೂಯಂ ಪ್ರಾಗೇವ ತಪ ಆದಿ ಸಂಪನ್ನಾಃ । ತಥಾಪಿ ಭೂಯಃ ಪುನರೇವ ತಪಸಾ ಸರ್ವೇಂದ್ರಿಯನಿಗ್ರಹಲಕ್ಷಣೇನ ವಿಶೇಷ-ತೋಽಪಿ ಬ್ರಹ್ಮಚರ್ಯೇಣ ಶ್ರದ್ಧಯಾ ಆಸ್ತಿಕ್ಯನಿಷ್ಠಯಾ ಯುಕ್ತಾಃ ॥ ಸಂವತ್ಸರಮೇಕಮಸ್ಮಾನ್ ಪರಿ-ಚರಂತಃ ಸಂವತ್ಸ್ಯಥ ಸಮ್ಯಗ್ ವಸತ । ತತೋ ಯಥೇಷ್ಟಂ ಪ್ರಶ್ನಾನ್ ಪ್ರಷ್ಟವ್ಯಾರ್ಥಾನ್ ಪೃಚ್ಛತ । ತತೋ ಯುಷ್ಮಾಭಿಃ ಪೃಷ್ಟಂ ಪ್ರತಿವಕ್ತುಂ ಯದಿ ವಯಂ ವಿಜ್ಞಾಸ್ಯಾಮಃ ತರ್ಹಿ ಸರ್ವಂ ವೊ ಯುಷ್ಮಭ್ಯಂ ವಕ್ಷ್ಯಾಮ ಇತಿ । ನ ಹ್ಯೇವಂ ಸತಿ ಅವಚನೇ ಕಾರಣಮಸ್ತೀತಿ ಹಶಬ್ದಃ ॥ 2 ॥**

ನಿವೆಲ್ಲರೂ ತಪಸ್ಸು, ಬ್ರಹ್ಮಚರ್ಯ ಮುಂತಾದ ಗುಣಗಳಿಂದ ಸಂಪನ್ನರೇ ಆಗಿದ್ದೀರಿ. ಹಾಗಿದ್ದರೂ ಇನ್ನೂ ಸರ್ವೇಂ-ದ್ರಿಯನಿಗ್ರಹ ರೂಪವಾದ ತಪಸ್ಸಿನಿಂದ ವಿಶೇಷವಾದ ಬ್ರಹ್ಮಚರ್ಯದಿಂದ ಮತ್ತು ಆಸ್ತಿಕ್ಯಬುದ್ಧಿಯಿಂದ ಕೂಡಿದವರಾಗಿ ಒಂದು ವರ್ಷಕಾಲ ನಮ್ಮ ಸೇವೆ ಮಾಡುತ್ತಾ ವಾಸಮಾಡಿರಿ. ಆನಂತರ ಯಥೇಚ್ಛವಾಗಿ ಪ್ರಶ್ನೆ ಮಾಡಿರಿ. ನಮಗೆ ತಿಳಿದಿದ್ದರೆ ನೀವು ಕೇಳಿದ ಎಲ್ಲವನ್ನು ಹೇಳಿಯೇ ಹೇಳುತ್ತೇವೆ ಎಂಬುದಾಗಿ ಪಿಪ್ಪಲಾದರು ಆ ಋಷಿಗಳನ್ನು ಕುರಿತು ಹೇಳಿದರು.

ಸುಕೇಶಾ ಮೊದಲಾದ ಮಹರ್ಷಿಗಳು ವರ್ಷ ಪರ್ಯಂತ ಬ್ರಹ್ಮಚರ್ಯವ್ರತವನ್ನು ಮಾಡಿ ಈ ಉಪನಿಷದ್ವಿದ್ಯೆಯನ್ನು ಸಂಪಾದಿಸಿದ್ದಾರೆ. ಆದ್ದರಿಂದ ಈ ವಿದ್ಯೆ ಅತಿಪ್ರಶಸ್ತವಾದುದು, ಎಂಬುದನ್ನು ತಿಳಿಸಲು ಸುಕೇಶಾ ಮೊದಲಾದವರ ಕಥೆಯನ್ನು ಈ ಉಪನಿಷತ್ತಿನಲ್ಲಿ ನಿರೂಪಿಸಲಾಗಿದೆ. ॥ 2 ॥

## ಯಾರು ಸೃಷ್ಟಿಕರ್ತ ?

**ಅಥ ಕಬಂಧೀ ಕಾತ್ಯಾಯನ ಉಪೇತ್ಯ ಪಪ್ರಚ್ಛ । ಭಗವನ್ ಕುತೋ**
**ಹ ವಾ ಇಮಾಃ ಪ್ರಜಾಃ ಪ್ರಜಾಯಂತ ಇತಿ । ತಸ್ಮೈ ಸ ಹೋವಾಚ ।**
**ಪ್ರಜಾಕಾಮೋ ಹ ವೈ ಪ್ರಜಾಪತಿಃ । ಸ ತಪೋಽತಪ್ಯತ ॥ 3 ॥**

ಅಥ ಉಕ್ತನಿಯಮಸಮನುಷ್ಠಾನಾನಂತರಂ ತೇಷಾಂ ಮಧ್ಯೇ ಕಬಂಧೀ ಕಾತ್ಯಾಯನಃ ಉಪೇತ್ಯ ಉಪಸದನಂ ಕೃತ್ವಾ ಪಿಪ್ಪಲಾದಂ ಪಪ್ರಚ್ಛ। ಪಾಠಕ್ರಮಾತ್ ಅರ್ಥಕ್ರಮೋ ಬಲೀಯಾನಿತಿ ಪಶ್ಚಾದುಕ್ತ-ಸ್ಯಾಪಿ ಕಾತ್ಯಾಯನಸ್ಯ ಪ್ರಶ್ನಪ್ರತಿವಚನಂ ಪ್ರಥಮಮುಕ್ತಮ್ । ಏವಂ ಅನ್ಯತ್ರಾಪಿ ದ್ರಷ್ಟವ್ಯಮ್ । ತಂ ಚ ಕ್ರಮಂ ತತ್ರೈವ ದರ್ಶಯಿಷ್ಯಾಮಃ । ಕಿಮಿತಿ । ಭಗವನ್ ಕುತೋ ನಿಮಿತ್ತಕಾರಣಾತ್ ಪುರುಷಾದಿಮಾಃ ದೇವಾದ್ಯಾಃ ಸರ್ವಾಃ ಪ್ರಜಾಃ ಪ್ರಜಾಯಂತೇ ಉತ್ಪದ್ಯಂತ ಇತಿ । ಹ ವಾ ಇತಿ ಪ್ರಜಾನಾಂ ಪ್ರಜನನಸ್ಯ ಸುಪ್ರಸಿದ್ಧತಾದ್ಯೋತಕೌ ನಿಪಾತೌ । ಸುಪ್ರಸಿದ್ಧಂ ತಾವತ್ ಪ್ರಜನನಮ್ । ನ ಚ ಏತದಂತರೇಣ ಕಾರಣಂ ಉಪಪನ್ನಮ್ । ಸರ್ವದಾಪಿ ಪ್ರಸಂಗಾತ್ । ನ ಚ ಅಚೇತನೈರೇವ ಕಾರಣೈಃ । ಚೆತನಾನಧಿಷ್ಠಿತಾನಾಂ ತೇಷಾಂ ಕಾರ್ಯಕರ್ತೃತ್ವದರ್ಶನಾತ್ । ನ ಚ ಜೀವೋಽಧಿಷ್ಠಾತಾ । ಅಸ್ವತಂತ್ರತ್ವಾತ್ । ನಾಪಿ ಈಶ್ವರಃ । ತದನುಪಲಂಭಾದಿತಿ ಪ್ರಶ್ನಾಭಿಪ್ರಾಯಃ । ಯದ್ಯಪಿ ಭಗವಾನ್ ಸರ್ವೇಷಾಂ ನ ಪ್ರತ್ಯಕ್ಷಗೋಚರೋ ವರ್ತಮಾನಃ ಕುಲಾಲಾದಯೋ ಘಟಾದಿಕಮಿವ ಪ್ರಜಾಃ ಪ್ರಜನಯತಿ ತಥಾಪಿ ಜಗತ್ಕಾರಣೀಭೂತಾನ್ ಪ್ರಾಣಾದೀನುತ್ಪಾದ್ಯ ತೇಷು ಆವಿಶ್ಯ ತಾನ್ ನಿಮಿತ್ತೀಕೃತ್ಯ ನಿಖಿಲಾಃ ಪ್ರಜಾಃ ಜನಯತೀತಿ ನ ಕಶ್ಚಿತ್ ವಿರೋಧ ಇತ್ಯಾಶಯವಾನ್ ತಸ್ಮೈ ಪೃಷ್ಟವತೇ ಕಾತ್ಯಾಯನಾಯ ಸ ಪಿಪ್ಪಲಾದಃ ಕಿಲ ಉತ್ತರಮುವಾಚ ಕಿಮಿತಿ । ಪ್ರಜಾನಾಂ ಬ್ರಹ್ಮಾದೀನಾಂ ಪತಿಃ ಪಾಲಕಃ ಪರಮೇಶ್ವರಃ ಕಲ್ಪಾದೌ ಕಿಲ ಆತ್ಮನಃ ಪ್ರಜಾಕಾಮೋ ದೇವಾದಿಪ್ರಜಾವತ್ತ್ವಮಾತ್ಮನ ಇಚ್ಛನ್ನವರ್ತತ । ಅಥ ಸರ್ವಜ್ಞೋಽಪಿ ಲೋಕವಿಡಂಬನಾಯ ತಪೋ-ಽತಪ್ಯತ । ಕರ್ತವ್ಯಮ್ ಅನ್ವಾಲೋಚಯತ್ ॥ 3 ॥

ಪಿಪ್ಪಲಾದರು ಹೇಳಿದ ನಿಯಮ ಅನುಷ್ಠಾನಾನಂತರ ಅವರುಗಳಲ್ಲಿ ಕತ್ಯರ ಮಗ ಕಬಂಧಿಯು ಪಿಪ್ಪಲಾದರನ್ನು ಸಮೀಪಿಸಿ ಪ್ರಶ್ನಿಸಿದರು. ಇಲ್ಲಿ ಕ್ರಮಪ್ರಕಾರ ಕಾತ್ಯಾಯನನನ್ನು ಕೊನೆಯವನೆಂದು ಹೇಳಿದ್ದರೂ ಇಲ್ಲಿ ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಬಲಿಷ್ಠವೆಂಬುದನ್ನು ತಿಳಿಯಬೇಕು. ಅವರು ಕೇಳಿದ ಪ್ರಶ್ನೆ ಜೀವಿಗಳ ಉತ್ಪತ್ತಿಗೆ ಸಂಬಂಧಿಸಿದ್ದರಿಂದ ಉತ್ಪತ್ತಿಯಾದನಂತರ ಪಾಲನಾದಿಗಳಿಗೆ ಸಂಬಂಧಿಸಿದ್ದು, ಆದ್ದರಿಂದ ಈ ಪ್ರಶ್ನೆ ಮೊದಲಿಗೆ ಪ್ರಸ್ತಾಪಿಸಲಾಗಿದೆ. ಈ ಪ್ರಶ್ನೆ ಕ್ರಮವನ್ನು ಇದೇ ರೀತಿ ಎಲ್ಲಾ ಕಡೆ ತಿಳಿಯಬೇಕು.

ಪ್ರಶ್ನೆ : ಪೂಜ್ಯರೇ, ಯಾರ ನಿಮಿತ್ತದಿಂದ ದೇವತೆಗಳೇ ಮೊದಲಾದ ಎಲ್ಲಾ ಜೀವಿಗಳು ಹುಟ್ಟುತ್ತಾರೆ. ಇಲ್ಲಿ ಉಪನಿಷತ್ತಿನಲ್ಲಿ ಬಂದಿರುವ ಹ, ವ ಎಂಬುದು ಪ್ರಜೆಗಳ ಉತ್ಪತ್ತಿಯು ಸುಪ್ರಸಿದ್ಧವಾಗಿರುವುದರಿಂದ ಯಾವ ಕಾರಣವೂ ಇಲ್ಲದೆ ಉತ್ಪತ್ತಿ ಕಾರ್ಯವಾಗಲಾರದು. ಅಚೇತನ ಪದಾರ್ಥಗಳು ಕಾರಣವಾಗಲಾರವು ಚೇತನದ ಅಧಿಷ್ಠಾನ ಇಲ್ಲದೆ ಕಾರ್ಯ ಕತೃತ್ವ ಸಿದ್ಧಿಸಲಾರದು. ಜೀವನು ಕರ್ತೃ ಎಂದು ಹೇಳಿದರೆ ಅಸ್ವತಂತ್ರನಾದ್ದರಿಂದ ಕೂಡುವುದಿಲ್ಲ. ಜೀವಜಡಕ್ಕಿಂತ ಭಿನ್ನವಾದ ಈಶ್ವರನನ್ನು ಹೇಳಿದರೆ ಅವನು ಕಾಣುಸುತ್ತಿಲ್ಲ. ಕುಂಬಾರನು ಘಟಾದಿಗಳನ್ನು ಪ್ರತ್ಯಕ್ಷವಾಗಿ ಸೃಷ್ಟಿಸುವಂತೆ ಎಲ್ಲರಿಗೂ ಈಶ್ವರನು ಪ್ರತ್ಯಕ್ಷವಲ್ಲ. ಹಾಗಿದ್ದರೂ ಜಗತ್ತಿಗೆ ಕಾರಣೀಭೂತರಾದ ಪ್ರಾಣಾದಿಗಳನ್ನು ಸೃಷ್ಟಿಸುತ್ತಾನೆಂಬುದರಲ್ಲಿ ಯಾವ ವಿರೋಧವೂ ಇಲ್ಲದ್ದರಿಂದ ಕಬಂಧಿಯ ಮಾಡಿದ ಪ್ರಶ್ನೆಗೆ ಪಿಪ್ಪಲಾರದು ಉತ್ತರಿಸುತ್ತಾರೆ. ಏನದು ಎಂದರೆ ಬ್ರಹ್ಮಾದಿ ಸಕಲ ಜೀವಿಗಳಿಗೂ ಪಾಲಕನಾದ ಪರಮಾತ್ಮನು ಅವದಿಯಲ್ಲಿ ಬ್ರಹ್ಮಾದಿದೇವತೆಗಳೇ ಮುಂತಾದ ಜೀವಿಗಳನ್ನು ತನ್ನಿಂದ

ಸೃಷ್ಟಿಯಾಗಬೇಕೆಂದು ಇಚ್ಛಿಸಿದನು. ತಾನು ಸರ್ವಜ್ಞನಾದರೂ ಲೋಕ ವಿಡಂಬನಗೋಸ್ಕರ ಆಲೋಚಿಸಿದನು (ತಪ ಆಲೋಚನೆ ಧಾತು) ಮುಂದಿನ ಕರ್ತವ್ಯವೇನು ಎಂದು ॥ 3 ॥

## ಮುಖ್ಯಪ್ರಾಣ-ಭಾರತಿಯರ ಸೃಷ್ಟಿ

**ಸ ಮಿಥುನಮುತ್ಪಾದಯತೇ । ರಯಿಂ ಚ ಪ್ರಾಣಂ ಚೇತ್ಯೇತೌ ಮೇ ಬಹುಧಾ ಪ್ರಜಾಃ ಕರಿಷ್ಯತ ಇತಿ । ಆದಿತ್ಯೋ ಹ ವೈ ಪ್ರಾಣೋ ರಯಿರೇವ ಚಂದ್ರಮಾಃ ॥ 4 ॥**

ಆಲೋಚಿತಕಾರ್ಯಃ ಸ ಪ್ರಜಾಪತಿಃ ಮಿಥುನಂ ಸ್ತ್ರೀಪುರುಷದ್ವಂದ್ವಂ ಉತ್ಪಾದಯತೇ ಉದಪಾದಯತ್ । ನ ಚ ಪ್ರಾಣಾದಿಜನನೇನ ಅಸ್ಯ ಪ್ರಯೋಜನಂ ಶಂಕನೀಯಮ್ । ತತ್ಸ್ವಾಭಾವ್ಯಾದಿತ್ಯುತ್ಪಾದಯತ ಇತಿ ವರ್ತಮಾನಾಪದೇಶೇನ ಆಹ । ಕಿಂ ತನ್ಮಿಥುನಂ ? ರಯಿಂ ವಿತ್ತಾಭಿಮಾನಿನೀಂ ಭಾರತೀಂ ಪ್ರಾಣಂ ಮುಖ್ಯಪ್ರಾಣಂ ಚ ಇತ್ಯೇತತ್ । ಸರ್ವಾಃ ಪ್ರಜಾಃ ಸಿಸೃಕ್ಷುಃ ಪರಮೇಶ್ವರಃ ಕಥಂ ತಾವುದಪಾದಯತ್ ಇತಿ ಚೇತ್ । ಏವಂ ಮನ್ಯತೇ ಸ್ಮ ಪ್ರಜಾಪತಿಃ ।

ಏತೌ ರಯಿಪ್ರಾಣೌ ಮೇ ಮಮ ಬಹುವಿಧಾಃ ಪ್ರಜಾಃ ಕರಿಷ್ಯತ ಇತಿ । ಏತಾವಾವಿಶ್ಯಾಹಂ ಪ್ರಜಾಃ ಸ್ರಕ್ಷ್ಯಾಮಿ । ಇಮೌ ಮೇ ಪ್ರಜಾಸರ್ಜನೇ ನಿಮಿತ್ತೀಭವಿಷ್ಯತ ಇತಿ । ಅಭೂತಾಂ ಚ ತೌ ಪ್ರಜಾಪತೇಃ ಪ್ರಜಾಸರ್ಜನೇ ನಿಮಿತ್ತಮಿತ್ಯುಚ್ಯೇತೆ- ಆದಿತ್ಯಾ ಇತ್ಯಾದಿನಾ ।

ತತೋಽಸೌ ಪ್ರಾಣಃ ಪ್ರಜಾಪತಿನಾ ದಿತ್ಯಾದಿಷು ಸೃಷ್ಟೇಷ್ವಾದಿತ್ಯಃ ಆದಿತ್ಯನಾಮಾ ಆದಿತ್ಯಾಂ ಪ್ರವಿಷ್ಟೋ ಬಭೂವ । ರಯಿರೇವ ರಯಿರಪಿ ಚಂದ್ರಮಾಃ ಚಂದ್ರಮಾನಾಮ್ನೀ ಚಂದ್ರಮಸ್ಯಾವಿಷ್ಟಾ ಬಭೂವ । ಏವಂ ಚಂದ್ರಸೂರ್ಯಗತೌ ತಾವಾವಿಶ್ಯ ತೌ ನಿಮಿತ್ತೀಕೃತ್ಯ ಪ್ರಜಾಪತಿಃ ಪ್ರಜಾಃ ಸಸರ್ಜೇತಿ ವಾಕ್ಯಶೇಷಃ ॥ 4 ॥

ಪ್ರಜಾಪತಿಯಾದ ವಿಷ್ಣುವು ಆಲೋಚಿಸಿದ ಕಾರ್ಯದಂತೆ ಸ್ತ್ರೀಪುರುಷರನ್ನು ಉತ್ಪಾದಿಸಿದನು. ಈ ಪ್ರಾಣಾದಿಗಳ ಜನನದಿಂದ ವಿಷ್ಣುವಿಗೆ ಪ್ರಯೋಜನವಿದೆಯೆಂದು ಶಂಕಿಸಬಾರದು । ಈ ಸೃಷ್ಟಿಸುವುದು ಅವನ ಸ್ವಾಭಾವಿಕ ಗುಣ (ನಪ್ರಯೋಜನತ್ವಾಧಿಕರಣದಲ್ಲಿ ನಿರ್ಣೀತವಾಗಿದೆ.) ಯಾರು ಆ ದಂಪತಿಗಳೆಂದರೆ – ವಿತ್ತಾಭಿಮಾನಿನಿಯಾದ ರಯಿ (ಭಾರತಿ)ಯನ್ನು ಮತ್ತು ಮುಖ್ಯಪ್ರಾಣನನ್ನು ಉತ್ಪಾದಿಸಿದನು. ನಾನಾ ವಿಧವಾದ ಜೀವರನ್ನು ಈ ದಂಪತಿಗಳನ್ನು ಹೇಗೆ ಸೃಷ್ಟಿಸುವುದು ಎಂದರೆ, ಪ್ರಜಾಪತಿ ಹೀಗೆ ತಿಳಿದನು. ಈ ರಯಿ ಪ್ರಾಣರು ನಾನಾ ವಿಧವಾದ ಜೀವಗಳ ಸೃಷ್ಟಿಯನ್ನು ಮಾಡುವವರು ನಾನು ಅವರಲ್ಲಿ ಆವಿಷ್ಟನಾಗಿ ಅವರನ್ನು ನಿಮಿತ್ತ ಮಾಡಿಕೊಂಡು ಸೃಷ್ಟಿ ಮಾಡುತ್ತೇನೆ. ಈ ಪ್ರಾಣನು ಪ್ರಜಾಪತಿ ಇಂದ ಸೃಷ್ಟಿಯಾದ ಆದಿತ್ಯನಲ್ಲಿ ಆದಿತ್ಯನಾಮಕನಾಗಿ ಆವಿಷ್ಟನಾದನು.

ರಯಿಯು ಚಂದ್ರನಲ್ಲಿ ಚಂದ್ರನಾಮಕಳಾಗಿ ಪ್ರವೇಶಿಸಿದಳು. ಹೀಗೆ ಚಂದ್ರ ಸೂರ್ಯರಲ್ಲಿ ಆವಿಷ್ಟರಾದ ಈ ದಂಪತಿಗಳನ್ನು ಪ್ರಜಾಪತಿಯು ನಿಮಿತ್ತರನ್ನಾಗಿ ಮಾಡಿ ಅವರಲ್ಲಿ ಆವಿಷ್ಟನಾಗಿ ಪ್ರಜೆಗಳನ್ನು ಸೃಷ್ಟಿಸುತ್ತಾನೆ.

ಏತತ್ಪರ್ಯಂತವಾಗಿ ರಯಿ ಪ್ರಾಣರ ಸೃಷ್ಟಿ ಪ್ರಕರಣವನ್ನು ಮತ್ತು ದೇವತೆಗಳಲ್ಲಿ ಅವರ ಪ್ರವೇಶನವನ್ನು ತಿಳಿಸಲ್ಪಟ್ಟಿತು. ಪ್ರಸ್ತುತ ರಯಿ ಮತ್ತು ಪ್ರಾಣರನ್ನೂ ನಿಮಿತ್ತೀಕರಿಸಿ ತತ್ಪರಿಣಾಮವಾಗಿ ಸೃಷ್ಟಿ ವಿಚಾರವನ್ನು ವಿವರಿಸಲ್ಪಟ್ಟಿದೆ.

**ರಯಿರ್ವಾ ಏತತ್ಸರ್ವಂ ಯನ್ಮೂರ್ತಂ ಚ ಅಮೂರ್ತಂ ಚ ತಸ್ಮಾತ್ ಮೂರ್ತಿರೇವ ರಯಿಃ । ಅಥಾದಿತ್ಯ ಉದಯನ್ ಯತ್ ಪ್ರಾಚೀಂ ದಿಶಂ ಪ್ರವಿಶತಿ ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೇ । ಯತ್ ದಕ್ಷಿಣಾಂ ಯತ್ ಪ್ರತೀಚೀಂ ಯತ್ ಉದೀಚೀಂ ಯದಧೋ ಯತ್ ಊರ್ಧ್ವಂ ಯತ್ ಅಂತರಾ ದಿಶೋ ಯತ್ ಸರ್ವಂ ಪ್ರಕಾ-ಶಯತಿ ತೇನ ಸರ್ವಾನ್ ಪ್ರಾಣಾನ್ ರಶ್ಮೀಷು ಸನ್ನಿಧತ್ತೇ ॥ 5 ॥**

ಪ್ರಕಾರಾಂತರೇಣ ಪ್ರಜೋತ್ಪತ್ತಿನಿಮಿತ್ತತ್ವಮುಚ್ಯತೆ - ರಯಿರ್ವಾ ಇತ್ಯಾದಿನಾ । ಏತತ್‌ಸರ್ವಂ ರಯಿರ್ವೈ ಪ್ರಮಾಣಸಿದ್ಧಮೇತತ್ । ಕಿಂ ತತ್ಸರ್ವಂ ತೇಜೋಽಬನ್ನಲಕ್ಷಣಮೂರ್ತಂ ಚ ಪ್ರಕೃತ್ಯಾದಿಕ-ಮಿತಿ ಯದುಪಾದಾನಕಾರಣರಾಶಿದ್ವಯಂ ತಸ್ಮಾತ್ ರಾಶಿದ್ವಯಾತ್ ಪ್ರವಿಭಕ್ತಾ ಯಾ ಮೂರ್ತಿಃ ಯನ್ಮೂರ್ತಂ ಸೈವ ರಯಿಃ । ಸಪ್ತಮ್ಯರ್ಥೇ ಚ ಇಯಂ ಪಂಚಮೀ । ಅಮೂರ್ತಪ್ರಾಣ ಇತಿ ಶೇಷಃ । ರಯಿ ಪ್ರಾಣೌ ಜಗದುಪಾದಾನೇಷು ಪಂಚಭೂತೇಷು ಪ್ರಕೃತ್ಯಾದಿಷು ಚ ಸ್ಥಿತ್ವಾ ತೇಷಾಂ ಉಪಾ-ದಾನತ್ವಶಕ್ತಿಂ ಪ್ರೇರಯಂತೌ ಪ್ರಜಾಪತೇಃ ಪ್ರಜೋತ್ಪತ್ತೌ ನಿಮಿತ್ತಂ ಭವತ ಇತಿ ಯಾವತ್ । ಆದಿತ್ಯೇ ಸ್ಥಿತ್ವಾ ಪ್ರಾಣಃ ಪ್ರಜೋತ್ಪತ್ತಿನಿಮಿತ್ತಂ ಭವತೀತ್ಯುಕ್ತಂ ತತ್‌ಕಥಮಿತ್ಯತ ಉಚ್ಯತೆ- ಅಥೇತ್ಯಾದಿನಾ । ಅಥಶಬ್ದಃ ಪ್ರಕೃತಮೂರ್ತಾದಿಪ್ರಕಾರಾದರ್ಥಾಂತರದ್ಯೋತಕಃ । ಆದಿತ್ಯಃ ಆದಿತ್ಯಸ್ಥಃ ಪ್ರಾಣಃ ಉದಯನ್ ಉದ್ಗಚ್ಛನ್ ಪ್ರಾಚೀಂ ದಿಶಂ ಪ್ರಕಾಶೇನ ಪ್ರವಿಶತೀತಿ ಯತ್ತೇನ ಪ್ರಾಚ್ಯಾನ್ ಪ್ರಾಚೀದಿಕ್‌ಪಾಲಾನ್ ತತ್-ದಿಗ್ಗತಪ್ರಾಣಿಪ್ರಣಯನಾತ್ ಪ್ರಾಣಶಬ್ದೋದಿತಾನ್ ಸಭಾರ್ಯೇಂದ್ರಾಗ್ನಿರೂಪಾನ್ ಚತುರೋ ದೇವಾನ್ ರಶ್ಮಿಷು ಸನ್ನಿಧತ್ತ ಇತ್ಯಾದಿ ಯೋಜ್ಯಮ್ । ಯದ್ದಕ್ಷಿಣಾಂ ಪ್ರವಿಶತಿ ತೇನ ದಕ್ಷಿಣದಿಕ್ಪಾಲಾನ್ ಪ್ರಾಣಾನ್ ಸಭಾರ್ಯಯಮನಿರ್ಋತಿರೂಪಾಂಶ್ಚತುರೋ ದೇವಾನ್ ರಶ್ಮಿಷು ಸನ್ನಿಧತ್ತೆ । ಯತ್‌ಪ್ರತೀಚೀಂ ಪ್ರವಿಶತಿ ತೇನ ಪ್ರತೀಚ್ಯಾನ್ ಪ್ರಾಣಾನ್ ಸಭಾರ್ಯವರುಣವಾಯುರೂಪ-ಚತುರೋ ದೇವಾನ್ ರಶ್ಮಿಷು ಸನ್ನಿಧತ್ತೇ । ಯದುದೀಚಿಂ ಪ್ರವಿಶತಿ ತೇನೋದೀಚ್ಯಾನ್ ಸಭಾರ್ಯ-ಸೋಮ-ಈಶಾನ-ರೂಪಚತುರೋ ದೇವಾನ್ ರಶ್ಮಿಷು ಸನ್ನಿಧತ್ತೆ । ಯದಧಃ ಪ್ರವಿಶತಿ ತೇನಾಧಸ್ತ-ನಾನ್ ಸಭಾರ್ಯಶೇಷಮಿತ್ರರೂಪಾನ್ ರಶ್ಮಿಷು ಸನ್ನಿಧತ್ತೆ । ಯದೂರ್ಧ್ವಂ ಪ್ರವಿಶತಿ ತೇನ ಊರ್ಧ್ವಾನ್ ಪ್ರಾಣಾನ್ ಸಭಾರ್ಯವೀಂದ್ರಕಾಮರೂಪಾಂ ಚತುರೋ ದೇವಾನ್ ರಶ್ಮಿಷು ಸನ್ನಿಧತ್ತೆ । ಯದಂತರಾ ದಿಶಃ ದಶದಿಶಾಂ ಮಧ್ಯಂ ಯತ್ಪ್ರವಿಶತಿ ತೇನ ತತ್ರತ್ಯಾನ್ ಪ್ರಾಣಾನ್ ರಶ್ಮಿಷು ಸನ್ನಿಧತ್ತೆ । ಯದಂತರಾ ದಿಶ

**ಇತಿ ನ ಅವಾಂತರದಿಗುಕ್ತಿಃ । ಅಗ್ನ್ಯಾದಿಕೋಣಪಾಲಾನಾಂ ಪ್ರಾಚ್ಯಾದಿಗ್ರಹಣೇನೈವ ಗೃಹೀತತ್ವಾತ್ । ತಥೋಕ್ತಂ ಭಾಷ್ಯೇ- 'ಪ್ರಾಚ್ಯಾಃ ಪ್ರಾಣಾಸ್ತಥೇಂದ್ರಾದ್ಯಾ ದಕ್ಷಿಣಾಶ್ಚ ಯಮಾದಯಃ । ಪ್ರತೀಚ್ಯಾ ವರುಣಾದ್ಯಾಸ್ತು ಸೋಮಾದ್ಯಾಶ್ಚೋತ್ತರಾಃ ಸ್ಮೃತಾಃ । ಶೇಷಮಿತ್ರಾವವಾಚೀನೌ ವೀಂದ್ರಕಾಮಾ-ವುದಕ್ತನೌ । ಸಭಾರ್ಯಾಃ ಕೋಣಪೈಃ ಸಾರ್ಧಂ ಚತ್ವಾರೋ ದಿಶಿ ದಿಶ್ಯಪಿ' ಇತಿ ।**

**'ದಿಙ್ಮಧ್ಯಸ್ಥಾ ಅಪಿ ಕೇಚಿತ್ ಜ್ಞಾತವ್ಯಾ' ಇತಿ ಟೀಕಾಕೃತಃ । ಯತ್ಸರ್ವಮಿತಿ ನಿಗಮನಮ್ । ಅನೇನ ಅಶೇಷಜಗತ್ಪ್ರಕಾಶಕತಯಾ ಪ್ರಜೋತ್ಪತ್ತಿನಿಮಿತ್ತತ್ವಮುಕ್ತಮ್ ॥ 5 ॥**

ತೇಜೋಬನ್ನಾದಿ ಮೂರ್ತ ಪದಾರ್ಥಗಳೂ, ಸೂಕ್ಷ್ಮವಾದ ಪ್ರಕೃತ್ಯಾದಿ ಅಮೂರ್ತ ಪದಾರ್ಥಗಳೂ ಜಗತ್ತಿಗೆ ಉಪಾದಾನ ಕಾರಣವಾಗುತ್ತದೆ. ಇವುಗಳಲ್ಲಿ ಯಾವುದು ಮೂರ್ತವೇ ಅದು ರಯಿಯು, ಅಮೂರ್ತವು ಪ್ರಾಣವು. ಇನ್ನು ಆದಿತ್ಯನಲ್ಲಿ ಸ್ಥಿತನಾದ ಪ್ರಾಣನು ಉದಯಿಸುವಾಗ ತನ್ನ ವ್ಯಾಪ್ತವಾದ ರಶ್ಮಿಗಳಲ್ಲಿ ಪೂರ್ವಾದಿ ದಶದಿಕ್ಕುಗಳಲ್ಲಿರುವ ಪ್ರಾಣಗಳನ್ನು ಸೇರಿಸಿಕೊಳ್ಳುತ್ತಾನೆ.

ಭಾರತಿದೇವಿ ಎಲ್ಲೆಡೆಗಳಲ್ಲಿಯೂ ಇರುವಳು. ಹೇಗೆಂದರೆ ಪೃಥಿವಿ, ತೇಜಸ್ಸುಗಳೆಂಬ ಮೂರ್ತಪದಾರ್ಥಗಳು ಮತ್ತು ಉಳಿದ ಪ್ರಕೃತ್ಯಾದಿಗಳೆಂಬ ಆಮೂರ್ತಪದಾರ್ಥಗಳು ಇವುಗಳೇ ಎಲ್ಲ ಜಗತ್ತಿಗೆ ಉಪಾದಾನ ಕಾರಣಗಳು, ಪರಮಾತ್ಮನ ಇಚ್ಛಾನುಸಾರವಾಗಿ ಮೂರ್ತಪದಾರ್ಥಗಳಲ್ಲೆಲ್ಲಾ ಭಾರತೀದೇವಿ ಇರುತ್ತಾಳೆ. ಆಮೂರ್ತಪದಾರ್ಥಗಳಲ್ಲಿ ಪ್ರಾಣನು ಇರುತ್ತಾನೆ. ಅವರಿಬ್ಬರೂ ಈ ಮೂರ್ತಾಮೂರ್ತಗಳಿಗೆ ಜಗತ್ತಾಗಿ ಪರಿಣಮಿಸುವ ಶಕ್ತಿಯನ್ನು ಕೊಡುವುದರ ಮೂಲಕ ಪರಮಾತ್ಮನಿಗೆ ಸೃಷ್ಟಿಕಾಲದಲ್ಲಿ ನಿಮಿತ್ತರೆನಿಸುತ್ತಾರೆ.

ಆಯಾ ದಿಕ್ಕುಗಳಲ್ಲಿರುವ ಪ್ರಾಣಿಗಳನ್ನು ಚೇಷ್ಟಾವಂತರನ್ನಾಗಿ ಮಾಡುವುದರಿಂದ ದಿಕ್ಪಾಲಕರಿಗೆ ಪ್ರಾಣರೆಂದು ಹೆಸರು. ಆದಿತ್ಯನು ಪೂರ್ವ ಮತ್ತು ಆಗ್ನೇಯ ದಿಕ್ಪಾಲಕರಾದ ಇಂದ್ರ ಮತ್ತು ಅಗ್ನಿಗಳನ್ನೂ, ಅವರ ಪತ್ನಿಯರನ್ನೂ (ಎಂದರೆ ನಾಲ್ವರನ್ನೂ, ತನ್ನ ರಶ್ಮಿಯಲ್ಲಿ ಸೇರಿಸಿಕೊಳ್ಳುತ್ತಾನೆ). ಹಾಗೆಯೇ ದಕ್ಷಿಣ ಮತ್ತು ನೈಋತ್ಯ ದಿಕ್ಪಾಲಕರಾದ ತಮ್ಮ ಭಾರ್ಯಾ ಸಹಿತರಾದ ಯಮ ಮತ್ತು ನಿರ್ಋತಿಯನ್ನೂ, ಪಶ್ಚಿಮ ಮತ್ತು ವಾಯುವ್ಯ ದಿಕ್ಪಾಲಕರಾದ, ವರುಣ ಮತ್ತು ವಾಯುವನ್ನೂ (ಭಾರ್ಯ ಸಹಿತರಾಗಿ), ಉತ್ತರ ಮತ್ತು ಈಶಾನ್ಯ ದಿಕ್ಪಾಲಕರಾದ ಸೋಮ ಮತ್ತು ಈಶಾನರನ್ನೂ (ಭಾರ್ಯಾ ಸಹಿತರಾಗಿ, ಆದೋ ದಿಕ್ಪಾಲಕರಾದ ಶೇಷ ಮತ್ತು ಮಿತ್ರರನ್ನೂ (ಭಾರ್ಯಾ ಸಹಿತರಾಗಿ), ಊರ್ಧ್ವ ದಿಕ್ಪಾಲಕರಾದ ಸಭಾರ್ಯ ಗರುಡ ಮತ್ತು ಕಾಮರನ್ನೂ ಅಂದರೆ (ವಿನಾಯಕ, ವಿವಸ್ವಾನ್ ನಾಮಕ ಸೂರ್ಯ ಮತ್ತು ಭಾರ್ಯೆರನ್ನು) ದಶದಿಕ್ಕುಗಳ ಮಧ್ಯೆ ಇರುವ ಅಂತರ ದಿಕ್ಕಿನಲ್ಲಿರುವ ಪ್ರಾಣಗಳನ್ನೂ ತನ್ನ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ.

(3) ಇಲ್ಲಿ ಅಂತರ ದಿಶಃ ಎಂದರೆ ದಶದಿಕ್ಕುಗಳ ಮಧ್ಯದಲ್ಲಿರುವ ಪ್ರದೇಶವೆಂದು ತಿಳಿಯಬೇಕು; ಕೋಣ ದಿಕ್ಕುಗಳನ್ನೆಲ್ಲ, ಏಕೆಂದರೆ ಉಪನಿಷತ್ತಿನಲ್ಲಿ ಪ್ರಾಚ್ಯಾನ್ ಪ್ರಾಣಾನ್ ಇತ್ಯಾದಿ ಬಹುವಚನ ಪ್ರಯೋಗವಿದೆ. ಆದ್ದರಿಂದ ಪೂರ್ವದಿಕ್ಕಿನ ಆಗ್ನೇಯ ದಿಕ್ಕನ್ನೂ (ಕೋಣವನ್ನೂ) ತೆಗೆದುಕೊಳ್ಳಬೇಕು. ಹಾಗೂ ದ್ವಿವಚನ ಪ್ರಯೋಗವಿರಬೇಕಾಗುತ್ತದೆ. ಆದರೆ ದಿಕ್ಪಾಲಕರ ಭಾರ್ಯೆಯರನ್ನೂ, ಸೇರಿಸಿದಾಗ ಬಹುವಚನ ಪ್ರಯೋಗವು ಸಾರ್ಥಕವಾಗುತ್ತದೆ.

(4) ಸೂರ್ಯನ ಪ್ರಕಾಶನವು ಘಟಾದಿ ಕಾರ್ಯಗಳಿಗೂ ನಿಮಿತ್ತವಾದುದರಿಂದ, ಆ ಕಾರ್ಯಗಳಿಗೂ ಪ್ರಾಣನು ನಿಮಿತ್ತ ಕಾರಣನೆಂದು ಹೇಳಿದ ಹಾಗಾಯಿತು. ಸೂರ್ಯನ ಉಷ್ಣಕಿರಣ ಸಂಬಂದವಿಲ್ಲದಿದ್ದರೆ ಅಂಕುರಾದಿಗಳು ಹೇಗೆ

ಆದೀತು? ಧನಧಾನ್ಯಾದಿಗಳ ಸಂಗ್ರಹವು ಹೇಗೆ? ನಾವು ತಿಂದ ಆಹಾರದಿಂದಲೇ ರೇತಸ್ಸೇ ಮೊದಲಾದವುಗಳ ಉತ್ಪತ್ತಿಗಾಗಿ ಗರ್ಭಾಧಾನಾದಿಗಳಿಗೆ ಪ್ರಯೋಜಕವಾಗುತ್ತದೆ, ದಶವೈದ್ಯಸಮೊ ವಹ್ನಿಃ ದಶವಹ್ನಿಸಮೊರವಿಃ ಎಂಬ ವಚನಾನುಸಾರ ಸೂರ್ಯನ ಪ್ರಕಾಶ, ಶಾಖಾದಿಗಳಿಂದಲೇ ಪ್ರಜೆಗಳ ಆರೋಗ್ಯಭಾಗ್ಯವು ಹೀಗೆ ಪ್ರಾಣನು ಅಶೇಷ ಜಗತ್ಪ್ರಕಾಶತ್ವೇನ ಪ್ರಜೋತ್ಪತ್ತಿಗೆ ನಿಮಿತ್ತನಾಗುತ್ತಾನೆ. ॥ 5 ॥

### ಜಗತ್ತಿನ ಸೃಷ್ಟಿಗಾಗಿ ಮುಖ್ಯಪ್ರಾಣ-ಭಾರತಿಯರ ಉದಯ

**ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ । ತದೇತ-ದೃಚಾಭ್ಯುಕ್ತಮ್ । ವಿಶ್ವರೂಪಂ ಕರಿಣಂ ಜಾತವೇದಸಂ ಪರಾಯ-ಣಮ್ । ಜ್ಯೋತಿರೇಕಂ ತಪಂತಮ್ । ಸಹಸ್ರರಶ್ಮಿಃ ಶತಧಾ ವರ್ತ-ಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥ 6 ॥**

**ನ ಕೇವಲಂ ಏತಾವತ್ ಕಿಂ ನಾಮ ಸ ಏಷ ಆದಿತ್ಯೇ ಸ್ಥಿತೋ ವಿಶ್ವರೂಪಃ ಪೂರ್ಣರೂಪಃ ಅದನಾದಗ್ನಿಃ ಪ್ರಾಣೋ ವೈಶ್ವಾನರೋ ವಿಶ್ವನರಸಂಬಂಧೀ ತಾಪನಪಾಚನಶೋಷಣಾದಿನಾ ಸರ್ವ-ಪ್ರಜೋತ್ಪತ್ತಿಹೇತುಃ ಸನ್ನುದಯತೆ । ಆದಿತ್ಯೋ ಹ ವೈ ಪ್ರಾಣ ಇತಿ ಯಾ ಪ್ರಸಿದ್ಧಿಃ ಸೂಚಿತಾ ಸೋಚ್ಯತೇ - ತದೇತದಿತಿ । ಯದುಕ್ತಂ ತದೇತತ್ ಋಚಾ 'ವಿಶ್ವರೂಪಮಿ'ತಿ ಮಂತ್ರೇಣಾಭ್ಯುಕ್ತಂ ಸ್ಪಷ್ಟಮುಕ್ತಮ್ ।**

ಇಲ್ಲಿ ''ಆದಿತ್ಯೋಹ ವೈ'' ಎಂದು 4ನೇ ಮಂತ್ರದಲ್ಲಿ ಹೇಳಿದ ಪ್ರಕಾರ ಆದಿತ್ಯಗತನಾದ ಪ್ರಾಣನೇ ಮುಖ್ಯ, ಪ್ರಸಿದ್ಧನು. ಇದಕ್ಕೆ ಪ್ರಮಾಣ - ಋಗ್ವೇದ ಮಂತ್ರದಲ್ಲಿ ''ವಿಶ್ವರೂಪಂಕರಿಣಂ'' ಎಂಬಲ್ಲಿ ಸ್ಪಷ್ಟೀಕರಿಸಲಾಗಿದೆ.

ಇದನ್ನೇ ಮಂತ್ರಾಲಯ ಪ್ರಭುಗಳು -

**ಅತೋ ದೃಢತರಂ ಪ್ರತಿಪತ್ತವ್ಯಮಿತಿ । ವಿಶ್ವರೂಪಮ್ । ಕರಾ ರಶ್ಮಯೋಽಸ್ಯ ಸಂತೀತಿ ಕರೀತಂ ಕರಿಣಮ್ । ಜಾತವೇದಸಂ ಜಾತಸ್ಯ ಸರ್ವಸ್ಯ ವೇದಿತಾರಂ ಪರಾಯಣಂ ಸರ್ವಪ್ರಾಣಿನಾಂ ಪರಮಾ-ಶ್ರಯಂ ಏಕಂ ಪ್ರಧಾನಂ ಜ್ಯೋತಿಃಪ್ರಕಾಶಕಂ ತಪಂತಂ ತಪನಕ್ರಿಯಾಂ ಕುರ್ವಂತಮ್ । ಉಪಲಕ್ಷಣ-ಮೇತತ್ । ಶೋಷಣಾದಿಕಂ ಚ ಕುರ್ವಾಣಂ ಆದಿತ್ಯಮಂಡಲಸ್ಥಂ ಪುರುಷಂ ಜಾನೀಯಾತ್ । ಕಿಮಿತಿ । ಸಹಸ್ರರಶ್ಮಿಃ ಅನಂತತೇಜಾಃ ಶತಧಾ ಅನಂತರೂಪೈಃ ಸರ್ವಪ್ರಾಣಿಷು ವರ್ತಮಾನೋ ಯಃ ಪ್ರಾಣಃ ಏಷ ಏವ ಪ್ರಜಾನಾಮುತ್ಪತ್ತಯೇ ಸೂರ್ಯೇ ಸ್ಥಿತ್ವಾ ಉದಯತೀತಿ । ಏವಂ ಚಂದ್ರಮಸಿ ಸ್ಥಿತಾಯಾ ದೇವ್ಯಾ ಅಪಿ ಓಷಧಿಜನನಾದಿದ್ವಾರೇಣ ಪ್ರಜೋತ್ಪತ್ತಿನಿಮಿತ್ತತ್ವಮುಪಪಾದನೀಯಮಿತಿ ॥ 6 ॥**

ಆದಿತ್ಯಾಂತರ್ಗತನಾದ ಈ ಮುಖ್ಯಪ್ರಾಣನು ಪೂರ್ಣರೂಪನೂ, ಎಲ್ಲವನ್ನೂ ಭಕ್ಷಿಸುವುದರಿಂದ, ಅಂದರೆ ಸಂಹಾರಮಾಡುವುದರಿಂದ, ಅಗ್ನಿ ಎಂಬ ಹೆಸರುಳ್ಳವನೂ ಆಗಿದ್ದಾನೆ. ಅಂಥಹ ಪ್ರಾಣನು ಶಾಖಕೊಡುವುದು, ಜೀರ್ಣ-ಮಾಡುವುದು, ಒಣಗಿಸುವುದು ಮುಂತಾದ ಕ್ರಿಯೆಗಳಿಂದ ಎಲ್ಲ ಜೀವಿಗಳಿಗೆ ಉತ್ಪತ್ತಿ ಕಾರಣನಾಗುತ್ತ ಉದಯಿಸುತ್ತಾನೆ.

**ಈ ವಿಷಯವು ಈ ಮಂತ್ರದಲ್ಲಿ ಉಕ್ತವಾಗಿದೆ -**

1) ಪರಿಪೂರ್ಣಸ್ವರೂಪವುಳ್ಳ, ಕಿರಣಗಳುಳ್ಳ, ಪ್ರಪಂಚದಲ್ಲಿರುವ ಸಕಲ ಪದಾರ್ಥಗಳನ್ನೂ ತಿಳಿದಿರುವ, ಎಲ್ಲ ಜೀವಿಗಳಿಗೂ ಮುಖ್ಯಾಶ್ರಯನಾದ, ಪ್ರಧಾನವಾದ, ಸುಡುವಿಕೆ ಮೊದಲಾದ ಕ್ರಿಯೆಗಳನ್ನು ಮಾಡುವ, ಆದಿತ್ಯ-ಮಂಡಲದಲ್ಲಿರುವ ಪ್ರಾಣನೇ ಅನಂತತೇಜಸ್ಸುಳ್ಳವನಾಗಿ, ಅನಂತರೂಪಗಳಿಂದ ಸಕಲಜೀವಿಗಳಲ್ಲೂ ಸನ್ನಿಹಿತನಾಗಿ ಜೀವಿಗಳ ಉತ್ಪತ್ತಿಗಾಗಿ ಉದಯಿಸುತ್ತಾನೆ ಎಂದು ತಿಳಿಯಬೇಕು ಹೀಗೇ ಚಂದ್ರನಲ್ಲಿರುವ ಭಾರತೀದೇವಿಯೂ ಔಷಧ್ಯಾದಿಗಳನ್ನು ಹುಟ್ಟಿಸಿ ಜೀವಿಗಳ ಉತ್ಪತ್ತಿಗೆ ನಿಮಿತ್ತಳಾಗುತ್ತಾಳೆ ಎಂದು ತಿಳಿಯಬೇಕು.

2) ಪಾಚನ, ಶೋಷಣಾದಿಗಳು ಆಗದಿದ್ದರೆ ಮನುಷ್ಯನ ಆರೋಗ್ಯವೂ ಸುಧಾರಿಸುವುದಿಲ್ಲ. ತನ್ನ ಉಷ್ಣತೇ, ಪ್ರಕಾಶಗಳಿಂದ ಸೂರ್ಯನು ಪ್ರಜೆಗಳಿಗೆ ಆರೋಗ್ಯಾದಿಗಳನ್ನು ಕೊಟ್ಟು ಪ್ರಜೋತ್ಪತ್ತಿಗೆ ನಿಮಿತ್ತನಾಗುತ್ತಾನೆ. ಸೂರ್ಯನಲ್ಲಿರುವ ಈ ಶಕ್ತಿಯು ಪ್ರಾಣನ ಅಧೀನವೇ ಆಗಿದೆ. ॥ 6 ॥

ತದನಂತರ - ಉತ್ಪತ್ತಿಗೆ ನಿಮಿತ್ತಕಾರಣವಾದ ಸಂವತ್ಸರಯುಕ್ತವಾದ ಕಾಲವನ್ನು - ಕಾಲದಲ್ಲೆ ಉತ್ತರ- ದಕ್ಷಿಣಾ-ಯನಗಳಲ್ಲಿ - ಅಧಿಷ್ಠಿತರಾದ ಪ್ರಾಣ ರಯಿಗಳಲ್ಲಿ ಅಂತರ್ಯಾಮಿಯಾದ ''ಪ್ರಜಾಪತಿ'' ಎಂದು ಹೆಸರುಳ್ಳ ಶ್ರೀಹರಿಯ ಪ್ರಜಾಕಾರಣತ್ವವನ್ನೂ ತಿಳಿಸಲ್ಪಡುತ್ತದೆ.

### ಕಾಲನಾಮಕರು ಪ್ರಾಣ-ಭಾರತಿಯರು

**ಸಂವತ್ಸರೋ ವೈ ಪ್ರಜಾಪತಿಃ । ತಸ್ಯಾಯನೇ ದಕ್ಷಿಣಂ ಚೋತ್ತರಂ ಚ ।**
**ತದ್ ಯೇ ಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ । ತೇ ಚಂದ್ರ-**
**ಮಸಮೇವ ಲೋಕಮಭಿಜಯಂತೇ । ತ ಏವ ಪುನರಾವರ್ತಂತೇ ।**
**ತಸ್ಮಾದೇತೇ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯಂತೇ । ಏಷ**
**ವೈ ರಯಿರ್ಯಃ ಪಿತೃಯಾಣಃ ॥ 7 ॥**

**ಅಥ ಸರ್ವೋತ್ಪತ್ತಿನಿಮಿತ್ತಕಾರಣಂ ಸಂವತ್ಸರಾದಿಲಕ್ಷಣಂ ಕಾಲಂ ತದವಾಂತರಭೇದೋತ್ತ-ರಾಯಣಾದ್ಯಧಿಷ್ಠಾತಾರೌ ರಯಿಪ್ರಾಣೌ ಚಾಧಿಷ್ಠಾಯ ಪ್ರಜಾಪತೇಃ ಪ್ರಜಾಕಾರಣತ್ವಮುಚ್ಯತೇ-- ಸಂವತ್ಸರ ಇತ್ಯಾದಿನಾ ।**

ಸಮಸ್ತ ವೇದಶಾಸ್ತ್ರಗಳಲ್ಲಿ ಶ್ರೀಮನ್ನಾರಾಯಣನೇ ಪ್ರಜಾಪತಿ ಸಂವತ್ಸರನಾಮಕನಾಗಿ ಪ್ರಜೆಗಳನ್ನು ಉತ್ಪಾದನೆ ಮಾಡುತ್ತಾನೆಂಬುದು ಪ್ರಸಿದ್ಧವು.

**ಪ್ರಜಾಪತಿಃ ಸಂವತ್ಸರೋ ವೈ ಸಂವತ್ಸರಸ್ಥಃ ಸನ್ ಪ್ರಜಾ ಜನಯತೀತಿ ಪ್ರಸಿದ್ಧಮ್ । ತಸ್ಯ ಸಂವತ್ಸರಸ್ಯ ಅಯನೇ ಸೂರ್ಯಗತಿವಿಶೇಷೋಪಲಕ್ಷಿತೌ ದೇವಯಾನಪಿತೃಯಾಣಲಕ್ಷಣದೇವತಾವಿಶೇಷಾಭಿಮತೌ ಭಾಗವಿಶೇಷೌ ನಾಮತೋ ದಕ್ಷಿಣಂ ಚೋತ್ತರಂ ಚ ತಯೋಃ ರಯಿಪ್ರಾಣಾವಧಿಷ್ಠಾತಾರಾವಿತಿ ಶೇಷಃ । ಕುತ ಏತದಿತ್ಯುಚ್ಯತೇ- ತದ್ ಯೇ ಹ ವೈ ಇತ್ಯಾದಿ ॥ ತತ್ ತತ್ರ ಸಾಧಕೇಷು ಯೋ ಋಷಯಃ**

**ಪ್ರಜಾಕಾಮಾಃ ಮೋಕ್ಷೇತರ ಫಲಕಾಮಾಃ ಸಂತ ಇತಿ ಯಾವತ್ ॥ ಇಷ್ಟಂ ಯಜನಂ ಪೂರ್ತಂ ಅನ್ನ-ದಾನಾದಿಕಂ ಕೃತಮನ್ಯಚ್ಚ ಕರ್ಮ ಇತ್ಯೇತದುಪಾಸತೇ ಅನುತಿಷ್ಠಂತಿ । ತ ಏತೇ ದಕ್ಷಿಣಂ ಪಿತೃಯಾಣಂ ಪ್ರತಿಪದ್ಯಂತೇ । ಪ್ರತಿಪನ್ನಾಶ್ಚ ತೇ ಚಾಂದ್ರಮಸಂ ಲೋಕಂ ಅಭಿಜಯಂತೇ ಪ್ರಾಪ್ನುವಂತಿ । ತ ಏವ ಪುನಃ ಸ್ವಕರ್ಮಾವಸಾನೇ ತಸ್ಮಾತ್ ಚಂದ್ರಲೋಕಾತ್ ಆವರ್ತಂತೆ ಹ ವೈ ॥ ಯತ ಏವಂ ಪಿತೃಯಾಣೇನ ಗತಾನಾಂ ಪುನರಾವೃತ್ತಿಮಚ್ಚಂದ್ರಲೋಕಪ್ರಾಪ್ತಿಲಕ್ಷಣಂ ಫಲಂ ಪ್ರಸಿದ್ಧಮ್ । ತಸ್ಮಾಚ್ಚಂದ್ರಾಧಿಷ್ಠಾತ್ರೀ ರಯಿರೇವೈಷಃ ಯಃ ಪಿತೃಯಾಣೋ ವೈ ಪಿತೃಯಾಣಾಧಿಷ್ಠಾತ್ರೀತಿ ಗಮ್ಯತೇ ॥ 7 ॥**

ಸಂವತ್ಸರದ ವಿಭಾಗವಾದ ದಕ್ಷಿಣಾಯಣ, ಉತ್ತರಾಯಣಗಳೇ ಪಿತೃಯಾಣ ಮತ್ತು ದೇವಯಾಣವೆನ್ನಿಸುತ್ತವೆ. ಯಾವ ಸಾಧಕ ಋಷಿಗಳು ಮೋಕ್ಷೇತರ ಫಲದಲ್ಲಿ ಆಸಕ್ತರಾಗಿ, ಯಜ್ಞಯಾಗಾದಿಗಳನ್ನೂ, ಅನ್ನದಾನಾದಿ ಕರ್ಮಗಳನ್ನು ಆಚರಿಸುತ್ತಾರೆಯೋ ಅವರು ಪಿತೃಯಾಣದಲ್ಲಿಹೋಗಿ, ಚಂದ್ರಲೋಕವನ್ನು ಹೊಂದುತ್ತಾರೆ ಮತ್ತು ಅವರ ಕರ್ಮ ಸವೆದ ಮೇಲೆ ಪುನಃ ಈ ಲೋಕಕ್ಕೆ ಹಿಂದಿರುಗುತ್ತಾರೆ. ಈ ಆಯನ ಅಭಿಮಾನಿ ದೇವತೆಗಳಲ್ಲಿ ಅಧಿಷ್ಠರಾಗಿ ಕ್ರಮವಾಗಿ ರಯಿ ಮತ್ತು ಪ್ರಾಣರು, ಇದ್ದು, ತನ್ಮೂಲಕ ಪ್ರಜಾಪತಿಯಾದ ಶ್ರೀವಿಷ್ಣುವಿನ, ಪ್ರಜೋತ್ಪತ್ತಿಗೆ ಕಾರಣರಾಗಿರುತ್ತಾರೆ. ರಯಿಯೇ ಪಿತೃಯಾಣಕ್ಕೆ ಅಧಿಷ್ಠಾತಳು.

ಆ ಕಾಲವಾದರೋ ಸಂವತ್ಸರ ಮಿತಿಯ ಕಾಲವು ಉತ್ತರಾಯಣ, ದಕ್ಷಿಣಾಯನವೆಂದು ಸೂರ್ಯಸಂಚಾರದಿಂದ ಆಗುವುದು. ಆ ಎರಡು ಯಾನಗಳಲ್ಲಿ ದೇವಯಾನ ಮತ್ತು ಪಿತೃಯಾನವೆಂದು ತತ್ ಪ್ರತಿಪಾದಕರಾದ ಅಭಿಮನ್ಯ-ವಾಗಿರುತ್ತೆ.

ಇನ್ನು ಉತ್ತರಾಯಣ ಮಾರ್ಗವು ದೇವಯಾನವೆಂತಲು ದಕ್ಷಿಣಾಯನ ಮಾರ್ಗವು ಪಿತೃಯಾನವೆಂತಲೂ, ಉತ್ತರಾಯಣಕ್ಕೆ ಪ್ರಾಣನು ದಕ್ಷಿಣಾಯನಕ್ಕೆ ರಯಿ (ಭಾರತಿ) ಇರುತ್ತಾರೆ.

ಕಾಮ್ಯಕರ್ಮಗಳಾದ ಯಜ್ಞ-ಯಾಗ-ಅನ್ನದಾನಾದಿಗಳನ್ನು ಆಚರಿಸುವವರು ಮೋಕ್ಷವನ್ನಪೇಕ್ಷಿಸದೇ ಪ್ರಜಾಭಿ-ಲಾಷೆಯಿಂದ ಆಚರಿಸುತ್ತಾರೋ ಅವರು ಮರಣಾನಂತರ ದಕ್ಷಿಣಾಯನ ಮಾರ್ಗವಾಗಿ ಪಿತೃಯಾನ ಹೊಂದಿದವರಾಗಿ ಚಂದ್ರಲೋಕವನ್ನೂ ಸೇರುತ್ತಾನೆ.

ಕರ್ಮಾಂತ್ಯದಲ್ಲಿ ಅವರು (ಚಂದ್ರಲೋಕದಲ್ಲಿ ಯೋಗ್ಯಫಲವನ್ನನುಭವಿಸಿದ ನಂತರ) ಅಲ್ಲಿಂದ ಭೂಲೋಕದಲ್ಲಿ ಪುನಃ ಹುಟ್ಟುತ್ತಾರೆ. ಆದ್ದರಿಂದ ಪಿತೃಯಾನದಲ್ಲಿ ಪ್ರಯಾಣ ಮಾಡಿದವರು ಪುನರಾವೃತ್ತಿರೂಪಫಲವೇ ಚಂದ್ರಲೋಕ ಲಕ್ಷಣವು – ಚಂದ್ರಗತಭದ ರಯಿಯೇ ಪಿತೃಯಾನವನ್ನು ನಿಯಮಿಸುವಳೆಂದು ತಿಳಿಯತಕ್ಕದ್ದು. ॥ 7 ॥

ಈ ರೀತಿಯಾಗಿ ಪಿತೃಯಾಣರೂಪ ದಕ್ಷಿಣಾಯನದಿಂದ ಹೊರಟವರಿಗೆ ಪುನರ್ಜನ್ಮವಾಗುವಂಥಾ ಚಂದ್ರಲೋಕ ಪ್ರಾಪ್ತಿ ಆಗುವುದೆಂದು ಭಾವವು.

ಏತತ್ಪರ್ಯಂತವಾಗಿ ಪಿತೃಯಾನ ಮಾರ್ಗವನ್ನೂ ತಿಳಿಸಿ – ಈಗ ದೇವಯಾನ ಮಾರ್ಗದಲ್ಲಿ ಹೋಗುವವರ ವಿಷಯವನ್ನೂ ಹೇಳಲ್ಪಡುತ್ತದೆ.

ಅಥ ಉತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾ ಆತ್ಮಾನಂ ಅನ್ವಿಷ್ಯ ಆದಿತ್ಯಂ ಅಭಿಜಯಂತೇ । ಏತದ್ವೈ ಪ್ರಾಣಾನಾಂ ಆಯತನಂ ಏತದಮೃತಂ ಅಭಯಮ್ । ಏತತ್ಪರಾಯಣಂ ಏತಸ್ಮಾತ್ ನ ಪುನರಾವರ್ತಂತ ಇತಿ ಏಷ ನಿರೋಧಃ । ತದೇಷ ಶ್ಲೋಕಃ । ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಅಹುಃ ಪರೇ ಅರ್ಧೇ ಪುರೀಷಿಣಮ್ । ಅಥ ಇಮೇ ಅನ್ಯ ಉಪರೇ ವಿಚಕ್ಷಣಂ ಸಪ್ತಚಕ್ರೇ ಷಳರ ಆಹುಃ ಅರ್ಪಿತಮಿತಿ ॥ 8 ॥

ಅಥ ಯೇ ಮುಮುಕ್ಷವಃ ತಪ ಆದಿ ಸಾಧನೈಃ ಪರಮಾತ್ಮಾನಮನ್ವಿಷ್ಯ ವಿಚಾರ್ಯ ವಿದಿತ್ವಾ ಚೋತ್ತರಾಯಣೇನ ಗತಾಃ ತೇ ಆದಿತ್ಯಮಭಿಜಯಂತೇ । ತತಶ್ಚ ಪರಮಂ ಬ್ರಹ್ಮ ಯಸ್ಮಾದೇತದ್ವೈ ದೇವಯಾನೇನ ಪ್ರಾಪ್ಯಂ ಬ್ರಹ್ಮೈವ ಪ್ರಾಣಾನಾಂ ಇಂದ್ರಾದೀನಾಂ ಆಯತನಂ ಆಧಾರಃ ಏತದೇವ ಅಮೃತಮಭಯಂ ಚ ಏತದೇವ ಪರಾಯಣಂ ಮುಕ್ತಾನಾಮಪ್ಯಾಶ್ರಯಃ । ಅತ ಏತಸ್ಮಾತ್ ನ ಪುನ-ರಾವರ್ತಂತ ಇತಿ ತಸ್ಮಾದಪುನರಾವೃತ್ತ್ಯಯೋಗ್ಯಾನಾಂ ಮಾರ್ಗನಿರೋಧಕತ್ವಾದೇವ 'ಏಷ ಆದಿತ್ಯೋ ನಿರೋಧೋ ವಿದುಷಾಮ್' ಇತ್ಯುಚ್ಯತೆ ಶೃತ್ಯಂತರ ಇತಿ ॥ ಯತಃ ಏವಮುತ್ತರಾಯಣೇನ ಗತಾನಾಂ ಅಪುನರಾವೃತ್ತಿಮದಾದಿತ್ಯಲೋಕಪ್ರಾಪ್ತಿಲಕ್ಷಣಂ ಫಲಂ ಪ್ರಸಿದ್ಧಮ್, ತಸ್ಮಾದಾದಿತ್ಯಾಧಿಷ್ಠಾತಾ ಪ್ರಾಣ ಏವೋತ್ತರಾಯಣಾಧಿಷ್ಠಾತೇತಿ ಜ್ಞಾಯತೆ ಇತಿ ವಾಕ್ಯಶೇಷಃ । ಆದಿತ್ಯಂ ಪ್ರಾಪ್ತಾನಾಂ ಪುನರಾವೃತ್ತಿರಿತ್ಯತ್ರ ಶ್ರುತ್ಯಂತರಸಮ್ಮತಿರುಚ್ಯತೇ । ಯದತ್ರೋಕ್ತಂ ಕೇಚಿತ್ ಪಿತೃಯಾನೇನ ಯಾಂತಿ, ಕೇಚಿತ್ ದೇವಯಾನೇನ ಇತಿ । ತತ್ರೈಷ ವಕ್ಷ್ಯಮಾಣಃ ಶ್ಲೋಕೊ ಮಂತ್ರಃ ಸಂಮತಿತ್ವೇನ ಭವತಿ । ಹೇಮಂತಶಿಶಿರಯೋರೈಕ್ಯೇನ ಪಂಚ ಋತವಃ । ತದಭಿಮಾನಿನಃ ಪಾದಾಃ ಅಂಶಾ ಯಸ್ಯ ತಂ ಪಂಚಪಾದಮ್ । ಪಿತರಂ ಪ್ರಜಾನಾಂ ಪಾಲಕಮ್ । ದ್ವಾದಶಮಾಸಾಭಿಮಾನಿದೇವಾ ಆಕೃತಯೊ ರೂಪಾಣಿ ಯಸ್ಯ ತಂ ದ್ವಾದಶಾಕೃತಿಮ್ । ವಿಚಕ್ಷಣಂ ವಿವೇಕಿನಮ್ । ಸಪ್ತ ಚಕ್ರಾಣಿ ಚಂಕ್ರಮ್ಯಂತೆ ರಥ ಏಭಿರಿತ್ಯಶ್ವಾ ಯಸ್ಯಾಸೌ ಸಪ್ತಚಕ್ರಃ । ಷಟ್‌ಸಂಖ್ಯಾಕಾಃ ಅರಾಃ ಯಸ್ಯಾಸೌ ಷಳರಃ । ತಸ್ಮಿನ್ನರ್ಪಿತಂ ವರ್ತಮಾನಂ ಆದಿತ್ಯಂ ದಿವೋಽಂತರಿಕ್ಷಸ್ಯ ಪರೇ ಅನ್ಯತರಸ್ಮಿನ್ ಕಿಂಚಿದ್ದಕ್ಷಿಣಾಶ್ರಿತಭಾಗೇ ಗಚ್ಛಂತಂ ಪುರೀಷಂ ಉದಕಂ ತದಸ್ಯಾಸ್ತೀತಿ ಪುರೀಷಿಣಂ ವರ್ಷಣಹೇತುಮ್ । ತದುಪಲಕ್ಷಿತಕಾಲಾಭಿಮಾನಿದೇವತಾಮಾರ್ಗಮಿತಿ ಯಾವತ್ । ಕೇಚಿತ್ ಕಾಮ್ಯ-ಕರ್ಮಿಣಃ ಸ್ವಪ್ರಾಪ್ಯಮಾಹುಃ । ಅಥ ತೇಭ್ಯೋಽನ್ಯೆ ಇಮೇ ಜ್ಞಾನಿನೋ ದಿವ ಉಪರೇ ಪರಸ್ಮಿನ್ ಕಿಂಚಿದುತ್ತರಾಶ್ರಿತೇ ಭಾಗೇ ಗಚ್ಛಂತಂ ಆದಿತ್ಯಂ ತದುಪಲಕ್ಷಿತಕಾಲಾಭಿಮಾನಿದೇವತಾಮಾರ್ಗಂ ಸ್ವಪ್ರಾಪ್ಯಮಾಹುರಿತಿ ಯಾವತ್ ॥ 8 ॥

ತಪಸ್ಸು , ಬ್ರಹ್ಮಚರ್ಯಾದಿಗಳಿಂದ ಪರಬ್ರಹ್ಮ ವಿಚಾರ ಪರವಾದ ಜ್ಞಾನಿಗಳು, ಉತ್ತರಾಯಣ ಮಾರ್ಗದಿಂದ ಆದಿತ್ಯನನ್ನು ಹೊಂದಿ, ಆನಂತರ ಪರಮಾತ್ಮನನ್ನೂ ಹೊಂದುತ್ತಾರೆ ಈ ದೇವಯಾನದಿಂದ ಪ್ರಾಪ್ತನಾದ ಪರಮಾತ್ಮನೇ ಅಭಯನು; ಇಂದ್ರಾದಿಗಳಿಗೂ, ಮುಕ್ತರಿಗೂ ಆಶ್ರಯನು. ಆದ್ದರಿಂದಲೇ ಮುಕ್ತರು ಆ ಲೋಕದಿಂದ ಹಿಂದಿರುಗುವುದಿಲ್ಲ. ಅಜ್ಞಾನಿಗಳಿಗೆ ಈ ಮಾರ್ಗವನ್ನು ಆದಿತ್ಯನು ನಿರೋಧ ಮಾಡುತ್ತಾನೆ. ಆದ್ದರಿಂದ ಅವನಿಗೆ ನಿರೋಧಃ ಎಂದೇ ಹೆಸರು. ಋತುಗಳು ಮತ್ತು ದ್ವಾದಶ ಮಾಸಗಳ ಅಭಿಮಾನಿ ದೇವತೆಗಳೇ ಯಾರಿಗೆ ಪ್ರತಿಮಾರೂಪವೋ, ಆ ಕಾಲಾಭಿಮಾನಿಯಾದ ಆದಿತ್ಯನನ್ನು ಕಾಮ್ಯಕರ್ಮಿಗಳೂ, ಜ್ಞಾನಿಗಳೂ ಬೇರೆ ಬೇರೆ ರೀತಿಯಿಂದ ಹೊಂದಿ, ಸ್ವಪ್ರಾಪ್ಯನೆಂದು ಹೇಳುತ್ತಾರೆ. ಸಪ್ತಾಶ್ವಗಳೂ, ಆರು ಅರೆಕಾಲುಗಳೂ ಇರುವರಥದಲ್ಲಿ ಸ್ಥಿತನಾದ ಆದಿತ್ಯನು ಅಂತರಿಕ್ಷದ ಕಿಂಚಿತ್ ದಕ್ಷಿಣ ಭಾಗದಲ್ಲಿ ಸಂಚರಿಸಿ, ಮಳೆಯನ್ನು ಸುರಿಸುವವನಾಗಿ ವರ್ಷಾಕಾಲಾಭಿಮಾನಿಯಾದಾಗ ಕಾಮ್ಯಕರ್ಮಿಗಳೂ, ಅವನೇ ಕಿಂಚಿತ್ ಉತ್ತರ ಭಾಗದಲ್ಲಿ (ತದುಪಲಕ್ಷಿತ ಕಾಲಾಭಿಮಾನಿ ದೇವತಾಮಾರ್ಗದಲ್ಲಿ) ಸಂಚರಿಸುವಾಗ ಜ್ಞಾನಿಗಳೂ, ಸ್ವಪ್ರಾಪ್ಯನೆಂದು ಹೇಳುತ್ತಾರೆ. ॥ 8 ॥

**ವಿಷಯ ವಿಶೇಷಃ** ಉತ್ತರಾಯಣ ಮಾರ್ಗದಲ್ಲಿ ಹೋಗುವವರೆಗೆ ಪುನರಾವೃತ್ತಿಯಿಲ್ಲದ ಆದಿತ್ಯ ಲೋಕಪ್ರಾಪ್ತಿ ರೂಪ ಫಲವು. ಆದ್ದರಿಂದ ಆದಿತ್ಯನಲ್ಲಿ ಅಧಿಷ್ಠಿತನಾದ ಪ್ರಾಣನೇ ಉತ್ತರಾಯಣಾಧಿಷ್ಠಾತನೆಂದು ತಿಳಿಯಬೇಕು.

ಹೇಮಂತ ಮತ್ತು ಶಿಶಿರ ಋತುಗಳ ಧರ್ಮವು ಪ್ರಾಯಶಃ ಒಂದೇ ರೀತಿ ಇರುವುದರಿಂದ, ಅವೆರಡನ್ನೂ, ಒಂದಾಗಿ ಸೇರಿಸಿ, ಆರು ಋತುಗಳನ್ನು ಐದನ್ನಾಗಿ (ಪಂಚಪಾದಾಃ) ಹೇಳಿದೆ. ಈ ಋತುಗಳ ಮತ್ತು ದ್ವಾದಶ ಮಾಸಗಳ ಅಭಿಮಾನಿ ದೇವತೆಗಳನ್ನು ಅಧಿಷ್ಠಾನ ಮಾಡಿಕೊಂಡು ಪರಮಾತ್ಮನು ಆಯಾಯ ಕಾಲ ಧರ್ಮಗಳಿಗೆ ನಿಯಾಮಕನಾಗಿರುತ್ತಾರನೆ.

**ಸಪ್ತ ಚಕ್ರಃ = ಸಪ್ತಚಕ್ರಾಣಿ ಚಂಕ್ರಮ್ಯತೇ ರಥ ಏಭಿಃ ಇತಿ ಅಶ್ವಾಃ ಅಸೌ – ಸಪ್ತಚಕ್ರಃ ।**

**ಷಡರಃ ಷಟ್ ಸಂಖ್ಯಾಕಾಃ ಅರಾಃ ಯಸ್ಯ ಅಸೌ ಷಡರಃ (ಷಳರಃ)** ಎಂದೂ ಪಾಠಬೇದವುಂಟು, ಆ ಪಕ್ಷದಲ್ಲಿ ಳಡಯೋಃ ಅಭೇದಃ ಎಂದು ಳಕಾರಕ್ಕೂ ಡಕಾರಕ್ಕೂ ಭೇದವಿಲ್ಲವೆಂದು ತಿಳಿಯಬೇಕು. ॥ 8 ॥

**ಮಾಸೋ ವೈ ಪ್ರಜಾಪತಿಃ । ತಸ್ಯ ಕೃಷ್ಣಪಕ್ಷಃ ಏವ ರಯಿಃ । ಶುಕ್ಲಃ ಪ್ರಾಣಃ ತಸ್ಮಾತ್ ಯೇ ತೇ ಋಷಯಃ ಶುಕ್ಲೇ ಇಷ್ಟಿಂ ಕುರ್ವಂತಿ । ಇತರ ಇತರಸ್ಮಿನ್ । ಅಹೋರಾತ್ರೇ ವೈ ಪ್ರಜಾಪತಿಃ ತಸ್ಯ ಆಹರೇವ ಪ್ರಾಣಃ ರಾತ್ರೀರೇವ ರಯಿಃ । ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇ ದಿವಾ ರತ್ಯಾ ಸಂಯುಜ್ಯಂತೆ । ಬ್ರಹ್ಮಚರ್ಯಮೇವ ತತ್ ಯತ್ ರಾತ್ರೌ ರತ್ಯಾ ಸಂಯುಜ್ಯಂತೆ ॥ 9 ॥**

**ಕಿಂಚ ಮಾಸೋ ವೈ ಪ್ರಜಾಪತಿಃ ।** ಮಾಸಲಕ್ಷಣಕಾಲಮಧಿಷ್ಠಾಯ ಪ್ರಜಾಃ ಸೃಜತೀತಿ ಯಾವತ್ । ತಸ್ಯ ಮಾಸಸ್ಯ ಅವಯವಭೂತಃ ಕೃಷ್ಣಪಕ್ಷಃ ಏವ ರಯಿಃ । ಶುಕ್ಲಪಕ್ಷಃ ಪ್ರಾಣಃ । ಪಕ್ಷದ್ವಯೇ ಸ್ಥಿತ್ವಾ ಪ್ರಜಾಪತೇಃ ಪ್ರಜೋತ್ಪತ್ತೌ ನಿಮಿತ್ತೀಭವತಿ ಇತಿ ಯಾವತ್ । ಕುತಃ ಏತತ್ । ಯಸ್ಮಾತ್ಖಲ್ವಾದಿತ್ಯಃ

**ಉತ್ತರಾಯಣಾಧಿಷ್ಠಾತಾ ಪ್ರಾಣಃ ಶುಕ್ಲಪಕ್ಷೇ ಸ್ಥಿತಃ ತಸ್ಮಾದೇವ ಹ್ಯೇತೇ ಉತ್ತರಾಯಣೇನ ಆದಿತ್ಯಂ ಜಿಗಮಿಷಂತಃ ಶುಕ್ಲಪಕ್ಷೇ ಇಷ್ಟಿಂ ಯಜನಂ ನಿಷ್ಕಾಮಂ ಪ್ರಾಣಪೂಜಾತ್ಮಕಂ ಕುರ್ವಂತಿ । ಯಸ್ಮಾಚ್ಚಂದ್ರ-ದಕ್ಷಿಣಾಯನಾಧಿಷ್ಠಾತ್ರೀ ರಯಿಃ ಕೃಷ್ಣಪಕ್ಷೇ ಸ್ಥಿತಾ । ತಸ್ಮಾದೇವ ಹಿ ಇತರೇ ದಕ್ಷಿಣಾಯನೇನ ಚಂದ್ರಮಸಂ ಪ್ರೇಪ್ಸಂತ ಋಷಯಃ । ಇತರ ಇತರಸ್ಮಿನ್ । ಕೃಷ್ಣಪಕ್ಷೇ ಕಾಮ್ಯಾಂ ರಯಿಪೂಜಾರೂಪಾಂ ಇಷ್ಟಿಂ ಕುರ್ವಂತೀತಿ । ಕಿಂಚ ಅಹೊರಾತ್ರೇ ಇತ್ಯಾದಿ ಪೂರ್ವವದ್ವ್ಯಾಖ್ಯೇಯಮ್ । ಏಕವದ್ಭಾವಸ್ಯ ವೈಕಲ್ಪಿಕತ್ವೇನ ಶೃತೌ ಅಹೋರಾತ್ರೇ ಇತಿ ಪ್ರಥಮಾ । ಮಾಸೊ ವಾ ಇತ್ಯಾದಿ ಪ್ರಾಯಪಾಠಾತ್ । ಪ್ರಾಣಂ ವಾ ಇತ್ಯಾದಿ ವಾಕ್ಯಂ ನ ಸಾಕ್ಷಾದಹರೇವ ಪ್ರಾಣಃ ಇತ್ಯನೇನ ಸಂಬಧ್ಯತೆ । ಅತೋ ಮಧ್ಯೇ ದಂಪತೀ ವೈ ಪ್ರಜಾ-ಪತಿಃ । ಪತಿರೇವ ಪ್ರಾಣಃ ಜಾಯೈವ ರಯಿರಿತ್ಯಧ್ಯಾಹಾರ್ಯಮ್ । ಏವಂ ಸತಿ ತದುಪಪಾದಕತ್ವೇನ ಅಸ್ಯ ಸಂಬಂಧಃ । ಯೇ ದಿವಾ ರತ್ಯಾ ರತಿಹೇತುಭೂತಯಾ ಸ್ತ್ರಿಯಾ ಸಂಯುಜ್ಯಂತೆ ಸಂಯೋಗ-ಮಾಚರಂತಿ । ತ ಏತೇ ಪ್ರಾಣಂ ಪ್ರಸ್ಕಂದಂತಿ ನಿರ್ಗಮಯಂತಿ । ಯತ್ರ ಕ್ವಚನ ಪರಿತ್ಯಜಂತಿ । ಯದ್ರಾತ್ರೌ ರತ್ಯಾ ಸಂಯುಜ್ಯಂತೇ । ತದಿದಂ ಬ್ರಹ್ಮಚರ್ಯಸಮಂ ಏವೇತಿ ಪ್ರಸಿದ್ಧಮ್ । ತೇನ ಜ್ಞಾಯತೇ ರತ್ಯಾಧಿಷ್ಠಾತ್ರೀ ರಯಿಃ ಸ್ತ್ರಿಯಾಂ ವರ್ತತೇ ಅಹರಧಿಷ್ಠಾತಾ ಪ್ರಾಣಃ ಪುಂಸೀತಿ । ತಥಾ ಹಿ । ದಿವಾ ಪುರುಷರೇತಸಿ ಪ್ರಾಣಸ್ಯ ಅಧಿಕಂ ಸನ್ನಿಧಾನಂ ನ ತದಾ ದೇವ್ಯಾಃ ಸ್ತ್ರಿಯಾಂ ತಾವತ್ ಸನ್ನಿಧಾನಮ್ । ತಥಾ ಚ ದಿವಾ ಪುರುಷರೇತಸಿ ಸ್ಥಿತೆ ಪ್ರಾಣೆ ಸ್ತ್ರಿಯಂ ಪ್ರಾಪ್ತೇ ಯತ್ರ ಕ್ವಚನಾಸಾವನೇನ ತ್ಯಕ್ತೋ ಭವತಿ । ರಾತ್ರೌ ತು ಸ್ತ್ರಿಯಾಂ ದೇವ್ಯಾ ಅಧಿಕಂ ಸನ್ನಿಧಾನಮಿತಿ ತದಾ ಪ್ರಾಣಃ ಸ್ವಭಾರ್ಯಾಮೇವ ಪ್ರಾಪ್ತೋ ಭವತಿ ಇತ್ಯುಪಪದ್ಯತೆ ಇತಿ ॥ 9 ॥**

ಪ್ರಜಾಪತಿಯಾದ ಬ್ರಹ್ಮನು ಮಾಸದಲ್ಲಿರುವಾಗ ಮುಖ್ಯಪ್ರಾಣನು ಶುಕ್ಲಪಕ್ಷದಲ್ಲಿಯೂ ಭಾರತಿಯು ಕೃಷ್ಣಪಕ್ಷದಲ್ಲಿ ಇರುತ್ತಾರೆ. ಪ್ರಾಣನು ಆದಿತ್ಯನಿಗೆ ಹಾಗೂ ಉತ್ತರಾಯಣಕ್ಕೂ ನಿಯಾಮಕನಾಗಿ. ಅದೇ ರೀತಿ ಶುಕ್ಲಪಕ್ಷಕ್ಕೂ ನಿಯಾ-ಮಕನಾಗಿರುವ ಕಾರಣದಿಂದಾಗಿ ಅದು ದೇವಯಾನವೆಂದು ಹೇಳಿ ಈಗ ಉತ್ತರಾಯಣ ಮಾರ್ಗವಾಗಿ ಆದಿತ್ಯ-ಲೋಕವನ್ನು ಸೇರಬಯಸುವವರು, ಇಹಲೋಕದ ಫಲಾಪೇಕ್ಷೆ ಇಲ್ಲದೆ ಶುಕ್ಲಪಕ್ಷದಲ್ಲಿ ಪ್ರಾಣ ಇತ್ಯಾದಿ ಉಪಾಸನೆಯನ್ನು ಆಚರಿಸುತ್ತಾರೆ. ಅದೇ ರೀತಿಯಾಗಿ ಭಾರತಿಯು ದಕ್ಷಿಣಾಯನ ಕೃಷ್ಣಪಕ್ಷದಲ್ಲಿ ಚಂದ್ರನಿಗೂ ನಿಯಾಮಕಳಾಗಿ ಅದನ್ನು ಪಿತೃಯಾಣವೆಂದು ಕರೆಯಲಾಗಿದೆ. ಹೀಗೆ ಚಂದ್ರಲೋಕವನ್ನು ಸೇರಲಪೇಕ್ಷಿಸುವವರು ಕೃಷ್ಣಪಕ್ಷದಲ್ಲಿ ಐಹಿಕ ಫಲ ಕೊಡುವ ಕಾಮ್ಯಕರ್ಮಗಳನ್ನು ಮಾಡುತ್ತಾರೆ. ಆಚಾರ್ಯ ಶ್ರೀಮಧ್ವರು ತಮ್ಮ ಭಾಷ್ಯದಲ್ಲಿ ತಿಳಿಸಿದಂತೆ ಪ್ರಜಾಪತಿಯು ಹಗಲೂ-ರಾತ್ರಿಗಳಲ್ಲಿ ನಿಯಾಮಕನಾಗಿರುವಾಗ ಪ್ರಾಣನು ಅಹಃ (ಹಗಲು) ರೂಪದಿಂದಲೂ ಭಾರತಿಯು ರಾತ್ರಿ ಸ್ವರೂಪಳಾಗಿ ಇರುತ್ತಾರೆ.

ಪ್ರಾಣನು ಪುರುಷರಲ್ಲಿಯೂ, ಸ್ತ್ರೀಯರಲ್ಲಿ ಭಾರತೀಯು ಉಪಸ್ಥಿತರಾಗಿದ್ದುಕೊಂಡು ಭಗವಂತನ ಸೃಷ್ಟಿಕಾರ್ಯದಲ್ಲಿ ನಿಮಿತ್ತರಾಗಿರುತ್ತಾರೆ. ಅಂದರೆ ಸೂರ್ಯನು ಬೆಳಗುತ್ತಿರುವಾಗ ಪುರುಷದಲ್ಲಿ ಪ್ರಾಣನ ವಿಶೇಷ ಸನ್ನಿಧಾನವಿರುವುದು. ಅದೇ ರೀತಿ ಭಾರತಿಯು ರಾತ್ರಿಯಲ್ಲಿ ಸ್ತ್ರೀಯರಲ್ಲಿ ಸನ್ನಿಹಿತಳಾಗಿರುತ್ತಾಳೆ. ಇಷ್ಟನ್ನು ತಿಳಿದು ವಿವೇಕಿಯಾದವನು ಹಗಲು ಹೊತ್ತಿನಲ್ಲಿ ಸ್ತ್ರೀಸಂಗ ಮಾಡಲು ಹೋಗುವುದಿಲ್ಲ. ಹಾಗೇನಾದರೂ ಹಗಲಿನಲ್ಲಿ ಸ್ತ್ರೀಸಂಗ ಮಾಡಿದರೆ ಆಗ ಪ್ರಾಣನ

ವೀರ್ಯವು ಭಾರತೀಯಲ್ಲಿ ಸ್ಪಂದಿಸದೇ ಮತ್ತೆಲ್ಲೋ ಹಾಕಿದಂತಾಗುವುದು. ಇದರಿಂದ ಬಹು ದೊಡ್ಡ ಪಾಪಕ್ಕೆ ಗುರಿಯಾಗುತ್ತಾರೆ. ಅದೇನೆಂದರೆ ಹಗಲಿನಲ್ಲಿ ಪುರುಷನ ರೇತಸ್ಸಿನಲ್ಲಿ ಪ್ರಾಣನ ಸನ್ನಿಧಾನವಿದ್ದರೂ ಸ್ತ್ರೀಯರಲ್ಲಿ ಭಾರತೀ ಸನ್ನಿಧಾನವಿರುವುದಿಲ್ಲ, ಆದ್ದರಿಂದ ಪುರುಷನ ವೀರ್ಯವು ಭಾರ್ಯೆಯನ್ನು ಬಿಟ್ಟು ಬೇರೆ ಕಡೆ ಪತಿತವಾಗುವುದು, ವ್ಯರ್ಥವಾಗುವುದು.1 ಆದ್ದರಿಂದ ರಾತ್ರಿಯಲ್ಲಿ ಭಾರತೀ ಸನ್ನಿಧಾನವಿರುವ ಕಾರಣದಿಂದ ಸಂಗವನ್ನು ಮಾಡಿದರೆ ಬ್ರಹ್ಮಚರ್ಯಕ್ಕೆ ಹಾನಿ ಬರುವುದಿಲ್ಲ, ಆ ಪುರುಷನು ಬ್ರಹ್ಮಚಾರಿ ಯೆಂದೆನಿಸಿಕೊಳ್ಳುತ್ತಾನೆ.

1. ಅಹಃ ಎಂದರೆ ಅದು ಪ್ರಾಣನ ಹೆಸರು. ಹಾಗೆಯೇ ರಾತ್ರಿ ಎಂದರೆ ಅದು ರಯಿಯ ಹೆಸರು ಎಂದು ಹೇಳಬಹುದು. ಹೀಗೆ ಮುಖ್ಯ ಪ್ರಾಣ, ಭಾರತಿ, ದೇವಿಯರು ಹಗಲು ರಾತ್ರಿಯಲ್ಲಿ ಅಧಿಷ್ಠಿತರಾಗಿ ವಾಸುದೇವನಿಗೆ ಪ್ರಜೋತ್ಪತ್ತಿ ಕಾರ್ಯದಲ್ಲಿ ನಿಮಿತ್ತರಾಗುತ್ತಾರೆ.

2. ಹಗಲಿನಲ್ಲಿ ಪುರುಷರಲ್ಲಿ ಪ್ರಾಣನ ಸಾನ್ನಿಧ್ಯವಿದ್ದಷ್ಟು ರಯಿಯ ಸಾನ್ನಿಧ್ಯವು ಸ್ತ್ರೀಯರಲ್ಲಿರುವುದಿಲ್ಲ, ರಾತ್ರಿಯಲ್ಲಾದರೋ ಇರುತ್ತದೆ. ಆದ್ದರಿಂದ ದಿವಾಸಂಗಮದಿಂದ ಪುರುಷನ ರೇತಸ್ಸಿನ ಮೂಲಕ ಪ್ರಾಣನೇ ಹೊರಗೆ ಹೋದಂತಾಗುತ್ತದೆ; ಇದು ಮಹಾಪಾಪಕಾರ್ಯ. ರಾತ್ರಿ ಕಾಲದಲ್ಲಿ ತನ್ನ ಸ್ತ್ರೀಯಲ್ಲಿ ಭಾರತಿಯ (ರಯಿಯ) ಸಾನ್ನಿಧ್ಯವು ಹೆಚ್ಚಾಗಿರುವುದರಿಂದ ಆಗ ವಿಹಿತವಾದದ್ದು; ಈ ಅನುಸಂಧಾನವನ್ನು ಹೊಂದಿರುವ ಪುರುಷನು ಬ್ರಹ್ಮಚರ್ಯದಿಂದ ಇದ್ದಂತೇ ಆಗುತ್ತದೆ; ಏಕೆಂದರೆ ಪ್ರಾಣನು ಸ್ವಭಾರ್ಯಯಾ ಭಾರತೀಯನ್ನೇ ಹೊಂದಿದಂತಾಗುತ್ತದೆ.

ಇದು ನೈಷ್ಠಿಕ ಬ್ರಹ್ಮಚರ್ಯವಲ್ಲ, ಗೃಹಸ್ಥನಾಗಿದ್ದರೂ ಹರಿವಾಯುಗಳ ವ್ಯಾಪಾರದ ಅನುಸಂಧಾನ ಹೊಂದಿರುವುದರಿಂದ ಬ್ರಹ್ಮಚರ್ಯವನ್ನು ಆಚರಿಸಿದಂತೆಯೇ ಸರಿ.

**ಅನ್ನಂ ವೈ ಪ್ರಜಾಪತಿಃ । ತತೋ ಹ ವೈ ತದ್ರೇತಃ । ತಸ್ಮಾದಿಮಾಃ ಪ್ರಜಾಃ ಪ್ರಜಾಯಂತ ಇತಿ । ತದ್ಯೇ ಹ ವೈ ತತ್ಪ್ರಜಾಪತಿವ್ರತಂ ಚರಂತಿ । ತೇ ಮಿಥುನಂ ಉತ್ಪಾದಯಂತೇ । ತೇಷಾಮೇವೈಷ ಬ್ರಹ್ಮಲೋಕೋ ಯೇಷಾಂ ತಪೋ ಬ್ರಹ್ಮಚರ್ಯಂ ಯೇಷು ಸತ್ಯಂ ಪ್ರತಿಷ್ಠಿತಮ್ । ತೇಷಾಮಸೌ ವಿರಜೋ ಬ್ರಹ್ಮಲೋಕೋ ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ ॥ 10 ॥**

*॥ ಇತಿ ಪ್ರಥಮಪ್ರಶ್ನಃ ॥*

ಕಿಂ ಚ ಅನ್ನಂ ವೈ ಪ್ರಜಾಪತಿಃ । ಕಥಮನ್ನೇ ಅವಸ್ಥಿತಸ್ಯ ಪ್ರಜಾಪತೇಃ ಪ್ರಜಾಜನಕತ್ವಂ ಇತ್ಯತ ಉಚ್ಯತೇ । ತತೋ ಅನ್ನಾತ್ ಖಲು ಏತದ್‌ರೇತೋ ಅಭಿಜಾಯತೇ । ಕಿಂ ತತಃ । ತಸ್ಮಾದ್ರೇತಸೋ ಹೀಮಾ ಮನುಷ್ಯಾದಿಪ್ರಜಾಃ ಪ್ರಜಾಯಂತ ಇತಿ । ಅನ್ನೇ ಸ್ಥಿತ್ವಾ ತದ್ರೇತೋರೂಪೇಣ ಪರಿಣಾಮ್ಯ ಏತದುಪಾದಾನೀಕೃತ್ಯಾಪಿ ಪ್ರಜಾಪತಿಃ ಪ್ರಜಾಃ ಸೃಜತೀತಿ ಯಾವತ್ । ಏವಂ ಪರಮೇಶ್ವರಃ ನಿಮಿತ್ತೋಪಾದಾ-

**ನೀಭೂತಾನ್ ಪದಾರ್ಥಾನ್ ದ್ವಾರೀಕೃತ್ಯ ಪ್ರಜಾಃ ಸೃಜತೀತಿ ವಿದುಷಃ ಫಲಮುಚ್ಯತೇ- ತದಿತ್ಯಾದಿ । ತತ್ ತತ್ರ ಪ್ರಜಾಸು ಯೇ ಖಲು ಪುರುಷಾಃ ತದೇತತ್ ಯಥೋಕ್ತಂ ಪ್ರಜಾಪತೇಃ ವ್ರತಂ ಕರ್ಮ ಚರಂತಿ ಜಾನಂತಿ । ತೇ ಮಿಥುನಮುತ್ಪಾದಯಂತೇ ಸಾಧ್ವಪತ್ಯಾ ಭವಂತಿ । ತೇಷಾಮೇವೈಷ ಸತ್ಯಾಖ್ಯೋ ಬ್ರಹ್ಮಲೋಕಃ ಪ್ರಾಪ್ಯೋ ಭವತಿ, ಯೇಷಾಂ ತಪಃ ಬ್ರಹ್ಮಚರ್ಯಂ ಚಾಸ್ತಿ । ಯೇಷು ಸತ್ಯಂ ಸತ್ಯವಚನಂ ಚ ಪ್ರತಿಷ್ಠಿತಂ ನಿಯಮೇನ ಸ್ಥಿತಮ್ । ನ ಕೇವಲಮೇತಾವತ್ ಕಿಂತು ಯಾವತ್ ಬ್ರಹ್ಮಲಯಂ ತತ್ರ ಸ್ಥಿತಾನಾಂ ತೇಷಾಮೇವ ಅಸೌ ವಿರಜೋಽಪ್ರಾಕೃತೋ ಬ್ರಹ್ಮಲೋಕೋ ವೈಕುಂಠಾದಿಃ ಪ್ರಾಪ್ಯೋ ಭವತಿ । ಏಷು ಜಿಹ್ಮಂ ಕೌಟಿಲ್ಯಂ ಅನೃತಂ ಅಸತ್ಯವಚನಂ ಮಾಯಾ ವಿಪ್ರಲಿಪ್ಸಾ ಇತ್ಯೇವಮಾದಿದೋಷಾಃ ನ ಸಂತಿ ತೇಷಾಮಿತಿ ಸಂಬಂಧಃ । ಸತ್ಯವಚನಾದಿಗುಣಾಭಿಧಾನೇನ ಸಿದ್ಧಸ್ಯಾಪಿ ಅನೃತಾದಿ ದೋಷಾ- ಭಾವಸ್ಯೋಕ್ತಿರಾದರಾರ್ಥೇತಿ ॥ 10 ॥**

**ಇತಿ ಪ್ರಥಮಪ್ರಶ್ನಪ್ರತಿವಚನಮ್ ॥**

ಅನ್ನದಲ್ಲಿ ಸ್ಥಿತನಾದ ಅನ್ನನಾಮಕನಾದ ವಾಸುದೇವನು. ಅನ್ನದಿಂದುಂಟಾದ ರೇತಸ್ಸನ್ನು ಉಪಾದಾನಕಾರಣವನ್ನಾಗಿ ಮಾಡಿಕೊಂಡು ಮಾನುಷಾದಿ ಪ್ರಜೆಗಳನ್ನು ಸೃಷ್ಟಿಸುತ್ತಾನೆ. ಹೀಗೆ ಪ್ರಾಣಾಂತರ್ಯಾಮಿ ಭಗವಂತನ ಉತ್ಸರ್ಜನ ರೂಪ ವ್ರತಗಳನ್ನು ಯಾರು ತಿಳಿಯುತ್ತಾರೆಯೋ ಅವರು ಸತ್ಪುತ್ರರನ್ನು ಪಡೆಯುತ್ತಾರೆ. ಅವರಿಗೆ ಸತ್ಯಲೋಕ ಪ್ರಾಪ್ತಿಯು ಮತ್ತು ಯಾವ ಪುರುಷನಲ್ಲಿ ಕೃಚ್ಛ ಚಂದ್ರಾಯಣಾದಿ ರೂಪ ತಪಸ್ಸು, ವೇದಾಭ್ಯಾಸ ಬ್ರಹ್ಮವಿಷಯಕ ಆಲೋಚನೆಯೂ ಇರು- ತ್ತದೆಯೋ ಮತ್ತು ಯಾರು ಸತ್ಯನಾಮಕನಾದ ಭಗವಂತನ ವಿಷಯವನ್ನೇ ಮಾತನಾಡುತ್ತಾರೆಯೋ, ಯಾರಲ್ಲಿ ಕುಟಿಲತೆ (ವಕ್ರಬುದ್ಧಿ), ಅಸತ್ಯವಚನ, ವಿಪ್ರಲಂಭಕತ್ವ (ಮೋಸ ಮಾಡುವಿಕೆ)ಗಳು ಇಲ್ಲವೋ ಅಂತಹವರಿಗೆ ಚತುರ್ಮುಖ ಬ್ರಹ್ಮನ ಸತ್ಯಲೋಕ ಪ್ರಾಪ್ತಿಃ ತದನಂತರ ಅಪ್ರಾಕೃತವಾದ ವೈಕುಂಠಾದಿ ಲೋಕಗಳೂ ಪ್ರಾಪ್ತವಾಗುತ್ತವೆ.

**ವಿಶೇಷ ವಿಷಯ :** ಆದ್ದರಿಂದ ಅನಂತಗುಣ ಪರಿಪೂರ್ಣನೂ, ಮುಖ್ಯ ಪ್ರಾಣಾದಿ ಸಕಲ ಚರಾಚರಾತ್ಮಕ ಜಗತ್ ಸೃಷ್ಟಿಕರ್ತನೂ ಆದ ಪರಮಾತ್ಮನನ್ನು ಶ್ರವಣ, ಮನನ, ನಿಧಿಧ್ಯಾಸನರೂಪ ಜಿಜ್ಞಾಸದಿಂದ ಪ್ರಸನ್ನೀಕರಿಸಿಕೊಂಡು, ವೈಕುಂಠಾದಿಗಳನ್ನು ಪಡೆಯುವುದು ಸಕಲ ಸಜ್ಜನರ ಕರ್ತವ್ಯವಾಗಿದೆ; ಅದು ಮುಖ್ಯಪ್ರಾಣನ ದ್ವಾರವೇ ಆಗತಕ್ಕದ್ದು. ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ ಎಂಬ ಸ್ಮೃತಿಯಿಂದಲೂ ಸ ಏನಾನ್ ಬ್ರಹ್ಮಗಮಯತಿ ಎಂಬ ಶ್ರುತಿಯಿಂದಲೂ ಪ್ರಾಣದೇವರಿಗೆ ಮೋಕ್ಷದಾಯಕತ್ವವು ಪ್ರಸಿದ್ಧವಾಗಿದೆ.

*ಇಲ್ಲಿಗೆ ಪ್ರಥಮ ಪ್ರಶ್ನೆಗೆ ಪಿಪ್ಪಲಾದರ ಉತ್ತರವು ಸಮಾಪ್ತವು.*

*ಇತಿ ಪ್ರಥಮಪ್ರಶ್ನೆಯು ॥*

**ಮೊದಲನೇ ಪ್ರಶ್ನೆಗೆ ಪಿಪ್ಪಲಾದರು ನೀಡಿದ ಉತ್ತರದ ಸಾರಾಂಶ :**

ಆರು ಜನ ಜ್ಞಾನಿಗಳು ಬ್ರಹ್ಮಜ್ಞಾನಿಗಳಾದ ಪಿಪ್ಪಲಾದರಲ್ಲಿ ಶಿಷ್ಯತ್ವವನ್ನು ವಹಿಸಿ ತಮ್ಮ ಸಂದೇಹಗಳಿಗೆ ತಕ್ಕ ಉತ್ತರ ಕೊಡಿರೆಂದು ಕೇಳುತ್ತಾರೆ. ಆರು ಶಿಷ್ಯರ ಪೈಕಿ ಕದಂಬ ಕಾತ್ಯಾಯನನೆಂಬುವನು ಪ್ರಥಮವಾಗಿ ಪ್ರಶ್ನೆಕೇಳುತ್ತಾನೆ. ಏನಂದು – ಹೇ ಬ್ರಹ್ಮಜ್ಞಾನಿಗಳೇ ಪ್ರಜೆಗಳು ಸೃಷ್ಟಿ ಆಗುತ್ತದೆಂದು ಕೇಳಿರುವೆ. ಆದರೆ ಈ ಜಗತ್ತಿನಲ್ಲಿರುವ ಪ್ರಜೆಗಳ ಸೃಷ್ಟಿಗೆ ಕಾರಣ ಯಾರು? ಎಂದು ದಯಮಾಡಿ ತಿಳಿಸಬೇಕು.

ಅದಕ್ಕೆ ಉತ್ತರವಾಗಿ ಪಿಪ್ಪಲಾದರು ಉತ್ತರಿಸುತ್ತಾರೆ - ಪ್ರಜಾಪತಿ ಎಂದೆನಿಸಿದ ಪರಮಾತ್ಮನು ಪ್ರಜೆಗಳನ್ನು ಸೃಷ್ಟಿಸಲು ಸಂಕಲ್ಪಿಸಿದರು. ಆಗ ಮೊಟ್ಟ ಮೊದಲಿಗೆ ಪ್ರಾಣ ಮತ್ತು ರಯಿಗಳನ್ನು ಸೃಜಿಸಿದನು. ಪ್ರಾಣ ಅಂದರೆ ಮುಖ್ಯಪ್ರಾಣನೆಂತಲೂ ರಯಿ ಅಂದರ ಭಾರತೀ ದೇವಿ ಎಂದು. ನಂತರ ಸಾಮಾನ್ಯವಾಗಿ ಎಲ್ಲರೂ ತಿಳಿದಿರುವಂತೆ ಕಣ್ಣಿಗೆ ಕಾಣಿಸುವ ಸೂರ್ಯಚಂದ್ರರೇ ಸೃಷ್ಟಿಗೆ ಹೇತುವೆಂದು ತೋರಿದರೂ ಅವರೊಳಗೆ ಮುಖ್ಯಪ್ರಾಣ - ಭಾರತೀ ದೇವಿಯರನ್ನು ಸ್ಥಾಪಿಸಿ ನಂತರ ಅವರಿಂದಲೇ ಜೀವರನ್ನು ಸೃಷ್ಟಿಸಿದನು. ಸೂರ್ಯಾಂತರ್ಯಾಮಿಯಾದ ಮುಖ್ಯಪ್ರಾಣನು ತನ್ನ ಪ್ರಕಾಶವನ್ನು 10 ದಿಕ್ಕುಗಳಿಗೂ ಬೀರಿ ಜಗತ್ತು ಪ್ರಕಾಶಮಾನವಾಗುವಂತೆ ಮಾಡಿ ಸೃಷ್ಟಿಸುತ್ತಾನೆ. ಎಲ್ಲಾದಿಕ್ಕುಗಳಿಗೂ ಅಭಿಮಾನಿ ದೇವತೆಗಳು ಪ್ರಾಣಾಧೀನರಾಗಿರುತ್ತಾರೆ ಎಂಬುದು ಗಮನಾರ್ಹ. ವಸ್ತುಗಳು ಹುಟ್ಟಿದ ನಂತರ ಕಾಲಪ್ರಭಾವದಿಂದ ಬದಲಾವಣೆ ಹೊಂದುವುದು ಎಂದು ನಾವು ತಿಳಿದಿರುತ್ತೇವೆ. ಆದರೆ ಆ ಕಾಲನಿಯಾಮಕನಾದ ಪರಮಾತ್ಮ ಪ್ರಾಣರಯಿಗಳ ಮೂಲಕ ಈ ಕೆಲಸವನ್ನು ಮಾಡಿಸುತ್ತಾನೆ. ಕಾಲಗಳಾದ ವರ್ಷ - ಋತು - ಪಕ್ಷ - ತಿಂಗಳು - ದಿನಗಳೆಂದು ವಿಭಾಗವಾಯಿತು. ಅವುಗಳಲ್ಲಿ ಉತ್ತರಾಯಣ ದಕ್ಷಿಣಾಯನವೆಂದು ಎರಡು ಪಕ್ಷಗಳಾದವು. ಉತ್ತರಾಯಣ - ಶುಕ್ಲಪಕ್ಷದ ಹಗಲಲ್ಲಿ ಮುಖ್ಯಪ್ರಾಣನು ಸನ್ನಿಹಿತನಾಗಿರುತ್ತಾನೆ. ದಕ್ಷಿಣಾಯನ ಕೃಷ್ಣಪಕ್ಷ ರಾತ್ರಿಯಲ್ಲಿ ಭಾರತಿಯು ಸನ್ನಿಹಿತಳಾಗಿರುತ್ತಾಳೆ. ಜ್ಞಾನಿಗಳು ಭಗವದ್ಸಾಕ್ಷಾತ್ಕಾರ ಹೊಂದಲು ಐಹಿಕ ಕರ್ಮಾಚರಣೆ ಮಾಡದೇ ಭಗವತ್ಪ್ರೀತ್ಯರ್ಥವಾಗಿ ಅವುಗಳನ್ನು ಭೋಗಗಳನ್ನು ತ್ಯಜಿಸಿ ಭಕ್ತಿದ್ವಾರಾ ಉತ್ತರಾಯಣದಲ್ಲಿ ಪರಮಪ್ರಾಪ್ತಿಯನ್ನು ಹೊಂದುತ್ತಾರೆ.

ಕಾಮ್ಯಕರ್ಮಗಳನ್ನು ಮಾಡುತ್ತಾ ಸ್ವರ್ಗಭೋಗ ಐಹಿಕ ಸುಖವನ್ನಪೇಕ್ಷಿಸುವವರು ದಕ್ಷಿಣಾಯನದಲ್ಲಿ ಆಚರಿಸುತ್ತಾರೆ. ಪ್ರಾಣ ಭಾರತೀಯರನ್ನು ನಿಮಿತ್ತ ಮಾಡಿಕೊಂಡು ಜಗತ್ಸೃಷ್ಟಿ ಕಾರ್ಯವು ಆಗುವುದು. ಹಗಲಿನಲ್ಲಿ ಮುಖ್ಯಪ್ರಾಣನು ರಾತ್ರಿಯಲ್ಲಿ ಭಾರತಿಯು ವಿಶೇಷ ಸಾನ್ನಿಧ್ಯವಿರುವುದರಿಂದ ಹಗಲಿನಲ್ಲಿ ಪುರುಷರು ತಮ್ಮ ಸ್ತ್ರೀಯರೊಡನೆ ಕೂಡಬಾರದು. ಹಾಗೇನಾದರೂ ಮಾಡಿದರೆ ರೇತಸ್ಸು ವ್ಯರ್ಥವಾಗುವುದು. ಮುಖ್ಯಪ್ರಾಣನು ಪುರುಷರಲ್ಲಿ ಸನ್ನಿಧಾನವಿರುವುದರಿಂದ ರಾತ್ರಿಯ ಸಮಯದಲ್ಲಿ ತಮ್ಮ ಪತ್ನಿಯೊಂದಿಗೆ ಸಂಗವು. ಆದರೆ ಪ್ರಾಣ ಭಾರತಿಯ ಸಂಬಂಧ ಕೂಡಿಸಿದಂತೆ. ಆಗ ಪುರುಷರು ತಮ್ಮ ಬ್ರಹ್ಮಚರ್ಯೆ ಉಳಿಸಿಕೊಳ್ಳುತ್ತಾರೆ. ಪ್ರಜಾಸೃಷ್ಟಿಗೆ ರೇತಸ್ಸೇ ಕಾರಣವಾದರೂ ಆ ರೇತಸ್ಸು ಅನ್ನದಿಂದ ಉತ್ಪನ್ನವಾಗುವುದು. ಅನ್ನದಲ್ಲಿ - ಅನ್ನನಾಮಕ ಪರಮಾತ್ಮನು ಸನ್ನಿಹಿತನಾಗಿರುವುದರಿಂದ ರಾತ್ರಿಸಂಗವಾಗುವುದರಿಂದ ತತ್ಫಲವಾಗಿ ಸತ್ಸಂತಾನಪ್ರಾಪ್ತಿಗೆ ಕಾರಣ ಆಗುತ್ತೆ. ಹೀಗೆ ತಿಳಿದುಕೊಂಡ ಜ್ಞಾನಿಯು ಇಹಲೋಕದಲ್ಲಿ ಸುಖವನ್ನನುಭವಿಸಿ ಅಂತ್ಯದಲ್ಲಿ ಉತ್ತಮವಾದ ವೈಕುಂಠಾದಿ ಲೋಕಗಳಲ್ಲಿ ಇದ್ದು ಸ್ವರೂಪಾನಂದವನ್ನು ಅನುಭವಿಸುತ್ತಾನೆ ಎಂದು ಪಿಪ್ಪಲಾದ ಋಷಿಗಳು ತಿಳಿಸಿದರು.

ಪ್ರಥಮ ಪ್ರಶ್ನೆಗೆ ಪಿಪ್ಪಲಾದರು ಉತ್ತರ ಕೊಟ್ಟರು. ಅಂದರೆ ಕಬಂಧಿ ಕೇಳಿದುದು ಜಗತ್ಸೃಷ್ಟಿಗೆ ಕಾರಣವನ್ನು ಹೇಳಿದರು. ಏಕೆಂದರೆ ಸೃಷ್ಟಿಯಾದ ನಂತರವೇ ಜಗತ್ತಿನಲ್ಲಿ ಇತರೆ ವ್ಯಾಪಾರಗಳು ಆಗುವುದು. ಜಗತ್ತೇ ಸೃಷ್ಟಿ ಆಗಿಲ್ಲದಿದ್ದರೆ ಯಾವ ರೀತಿಯ ವ್ಯಾಪಾರವು ಆಗಲು ಸಾಧ್ಯವಿಲ್ಲ. ಆದ್ದರಿಂದ ಶಿಷ್ಯತ್ವವನ್ನು ವಹಿಸಿ ಬಂದವರು ಉಪನಿಷತ್ತಿನಲ್ಲಿ ತಿಳಿಸಿದಂತೆ ಕಬಂಧಿ ಆರನೆಯವನಾದರೂ ಅವನ ಪ್ರಶ್ನೆ ಸೂಕ್ತ ನ್ಯಾಯಬದ್ಧವಾದ್ದರಿಂದ ಮೊದಲಿಗೆ ಅವನು ಪ್ರಶ್ನೆ ಮಾಡಲು ಅವಕಾಶ ಕೊಟ್ಟಿರುತ್ತಾರೆ.

ಪ್ರಥಮ ಪ್ರಶ್ನ ಸಂಪೂರ್ಣ ॥



# ಅಥ ದ್ವಿತೀಯಪ್ರಶ್ನಃ

**ಅಥ ಹೈನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ । ಭಗವನ್ ಕತ್ಯೇವ ದೇವಾಃ ಪ್ರಜಾ ವಿಧಾರಯಂತೇ । ಕತರ ಏತತ್ಪ್ರಕಾಶಯಂತೇ ಕಃ ಪುನರೇಷಾಂ ವರಿಷ್ಠ ಇತಿ ॥ 1 ॥**

**ಅಥ ಹೈನಂ ಭಾರ್ಗವಃ । ಪ್ರಶ್ನಾರ್ಥಸ್ಯ ಉಕ್ತಾನಂತರ್ಯಸೂಚಕೋ ಅಥಶಬ್ದಃ । ಉಕ್ತಂ ಪರಮೇಶ್ವರಸ್ಯ ಸಕಲಪ್ರಜಾಜನಕತ್ವಮ್ । ಲಬ್ಧಜನ್ಮನ ಏವ ಸ್ಥಿತ್ಯಾದೀತಿ ಸ್ಥಿತಿಜ್ಞಾನಹೇತುತ್ವಂ ವಕ್ತವ್ಯಮ್ । ಪ್ರಾಕ್ ಪ್ರಾಣಸ್ಯ ವರಿಷ್ಠತ್ವಮಭಿಪ್ರೇತಂ ತಚ್ಚೋಪಪಾದನೀಯಮಿತಿ ತದರ್ಥಮುತ್ತರಗ್ರಂಥಃ । ಭಗವನ್ ಕತ್ಯೇವ ಕಿಯತ್ಸಂಖ್ಯಾಕಾ ದೇವಾಃ ಪ್ರಜಾ ವಿಧಾರಯಂತೇ ಕತರೇ ದೇವಾಃ ಏತದ್ವಿಷಯಜಾತಂ ಪ್ರಕಾಶಯಂತೆ ಕಾನ್ನಿಮಿತ್ತೀಕೃತ್ಯ ಪರಮೇಶ್ವರಃ ಪ್ರಜಾನಾಂ ಸ್ಥಿತಿಂ ವಿಷಯಪ್ರಕಾಶಂ ಚ ಕರೋತೀತಿ ಯಾವತ್ । ಏಷಾಂ ಧಾರಣಪ್ರಕಾಶಹೇತೂನಾಂ ದೇವಾನಾಂ ಮಧ್ಯೇ ಕೋ ವರಿಷ್ಠಃ ಅತಿಶಯೇನ ವರಃ । ಪೂರ್ವೋಕ್ತರೀತ್ಯಾ ಪ್ರಾಣೇನ ಭಾವ್ಯಮ್ ॥ 1 ॥**

ಭೃಗುವಂಶಜ ವೈದರ್ಭಿಯು ಎರಡನೇ ಪ್ರಶ್ನೆಯನ್ನು ಕೇಳುತ್ತಾನೆ –

"ಹೇ ಪರಮಪೂಜ್ಯರೇ ! ನನ್ನ ಪ್ರಶ್ನೆ ಈ ರೀತಿ ಇರುತ್ತೆ – ಸೃಷ್ಟಿಯಾದ ಪ್ರಜೆಗಳನ್ನು ಎಷ್ಟು ದೇವತೆಗಳು ಧಾರಣ ಮಾಡುತ್ತಾರೆ? ಮನುಷ್ಯಾದಿಗಳಿಗೆ ಶಬ್ದಸ್ಪರ್ಶರೂಪರಸಗಂಧಾದಿಗಳ ಜ್ಞಾನವನ್ನು ಕೊಡುತ್ತಾರೆ? ಭಗವಂತನು ಯಾರನ್ನು ನಿಮಿತ್ತ ಮಾಡಿಕೊಂಡು ಪ್ರಜೆಗಳಿಗೆ ತಮ್ಮ ಸ್ಥಿತಿಯ ವಿವೇಕವನ್ನು ಕೊಡುತ್ತಾನೆ? ಪ್ರಕಾಶಮಾನರಾದ ದೇವತೆಗಳ ಪೈಕಿ ಅತ್ಯುತ್ತಮನು ಯಾರು? ಹಿಂದೆ ತಾವು ತಿಳಿಸಿದ ರೀತ್ಯಾ ಪ್ರಾಣನೇ ಆಗಬೇಕು. ಹಾಗಾದರೆ ಪ್ರಾಣನಿಗೆ ಶ್ರೇಷ್ಠತ್ವವು ಇದೆ ಎಂದರೆ ಪ್ರಮಾಣವೇನು? ಮುಖ್ಯಪ್ರಾಣನೇ ಸಕಲ ದೇವತೆಗಳ ಪೈಕಿ ಉತ್ತಮನು ಎಂಬುದನ್ನು ಯಾವ ರೀತಿ ಸಮರ್ಥಿಸಲಾಗಿದೆ" ಎಂದು.

ಹೀಗೆ ವೈದರ್ಭಿಯ ಪ್ರಶ್ನೆಗೆ ಪಿಪ್ಪಲಾದರು ಉತ್ತರಿಸುತ್ತಾರೆ.

**ತಸ್ಮೈ ಸ ಹೊವಾಚ । ಆಕಾಶೋ ಹ ವಾ ಏಷ ದೇವೋ ವಾಯುರಗ್ನಿರಾಪಃಪೃಥಿವೀವಾಙ್ಮನಶ್ಚಕ್ಷುಃಶ್ರೋತ್ರಂ ಚ ತೇ ಪ್ರಾಕಾಶ್ಯಾ ಅಭಿವದಂತಿ । ವಯಮೇತದ್ಬಾಣಮವಷ್ಟಭ್ಯ ವಿದಾರಯಾಮ ಇತಿ ॥ 2 ॥**

**ಭಾಷ್ಯ : ವಾಯುರಗ್ನಿರಿತ್ಯತ್ರ ಭೂತವಾಯುರುಚ್ಯತೆ ॥**

ಉಪನಿಷತ್ತಿನ ಮಂತ್ರದಲ್ಲಿ ವಾಯುರಗ್ನಿರಾಪಃ ಎಂಬಲ್ಲಿ ವಾಯು ಎಂದರೆ ಭೂತವಾಯು ಎಂದೇ ಗ್ರಹಿಸಬೇಕು. ಹಾಗಲ್ಲದೇ ಮುಖ್ಯವಾಯು ಎಂದು ತಿಳಿದುಕೊಳ್ಳಬಾರದು.

ತತ್ಕಥಂ ಇತ್ಯೇವಂ ಪೃಷ್ಟವತೇ ತಸ್ಮೈ ಸ ಹೋವಾಚ । ಏಷ ಆಕಾಶಾಭಿಮಾನೀ ದೇವಃ ಹ ವೈ ಯಸ್ತ್ವಯಾ ಧಾರಕಃ ಪೃಷ್ಟಃ ಏವಂ ವಾಯುಃ ಭೂತವಾಯುರ್ದೇವತಾ ಇತ್ಯಾದಿ । ಅತ್ರ ಉಪಲಕ್ಷಣತ್ವೇನ ಪೃಥಿವೀ ಚ ಪೃಥಿವೀಮಾತ್ರ ಇತ್ಯಾದಿ ವಕ್ಷ್ಯಮಾಣಾಃ ಸರ್ವೇ ಮುಖ್ಯಪ್ರಾಣಸಹಿತಾಃ ತತ್ತ್ವದೇವಾಃ ಗ್ರಾಹ್ಯಾಃ । ತೇಷು ಚಕ್ಷುರಾದಯಃ ಪ್ರಕಾಶಹೇತವಃ । ಅನ್ಯೇ ಸ್ಥಿತಿಹೇತವಃ ಇತಿ ಜ್ಞಾತವ್ಯಮ್ । ಉಕ್ತಮಾತ್ರಗ್ರಹಣೇ ಕಃ ಪುನರೇಷಾಂ ವರಿಷ್ಠ ಇತಿ ಪ್ರಶ್ನಾನನುಗುಣಃ ಪರಿಹಾರಃ ಸ್ಯಾತ್ । ಏತೇಷಾಂ ಪ್ರಾಣಸ್ಯ ವರಿಷ್ಠತ್ವಾವಧಾರಣಾಯ ಆಖ್ಯಾಯಿಕೋಚ್ಯತೇ। ತೇ ಪ್ರಾಕಾಶ್ಯಾ ಇತ್ಯಾದಿ। ತ ಏತೇ ಧಾರಕಾಃ ಪ್ರಕಾಶಕಾಶ್ಚ ದೇವಾಃ ಪ್ರಾಕಾಶ್ಯಾಃ ಪ್ರಕಾಶವಂತಃ ಉಚ್ಚೈರಿತಿ ಯಾವತ್ । ಅಭಿವದಂತಿ । ಕದಾಚಿತ್ ಅನ್ಯೋನ್ಯಂ ಸ್ಪರ್ಧಯೈವಾಭ್ಯವದನ್ । ಕಿಮಿತಿ ? ವಯಮೇತತ್ ಬಾಣಂ ಶರೀರಂ ಅವಷ್ಟಭ್ಯಾಶ್ರಿತ್ಯ ವಿಧಾರಯಾಮಃ । ಪ್ರಕಾಶಯಾಮಶ್ಚೇತಿ । ಅಹಮೇವ ಸ್ವಾತಂತ್ರ್ಯೇಣ ದೇಹಧಾರಕೋ ನ ತ್ವಮಿತಿ ಧಾರಕಃ। ಅಹಮೇವ ಸ್ವಾತಂತ್ರ್ಯೇಣ ವಿಷಯಪ್ರಕಾಶಕೊ ನ ತ್ವಮಿತಿ ಪ್ರಕಾಶಕಃ ಇತಿ ಯಾವತ್ ॥ 2 ॥

ಅನಂತರ ಭಾರ್ಗವರು ಪಿಪ್ಪಲಾದರನ್ನು ಪ್ರಶ್ನಿಸುತ್ತಾರೆ:- ಪೂಜ್ಯರೇ, ಪರಮೇಶ್ವರನಿಂದ ಸರ್ವ ಜಗತ್ ಸೃಷ್ಟವಾಗುವುದೆಂದು ಹೇಳಿದಿರಿ. ಹೀಗೆ ಸೃಷ್ಟವಾದ ಜಗತ್ತನ್ನು ಎಷ್ಟು ದೇವತೆಗಳು, ಧಾರಣ ಮಾಡುತ್ತಾರೆ, ಪ್ರಕಾಶಿಸುತ್ತಾರೆ. ಆ ದೇವತೆಗಳಲ್ಲಿ ಯಾರು ಅತ್ಯಂತ ಶ್ರೇಷ್ಠರು? ಇದಕ್ಕೆ ಉತ್ತರ ರೂಪವಾಗಿ ಗುರುಗಳು ಒಂದು ಸಣ್ಣ ಕಥೆಯನ್ನೇ ಹೇಳಿದರು. ಏನೆಂದರೆ ಪೃಥ್ವಿವ್ಯಾದಿ ಭೂತಾಭಿಮಾನಿ ದೇವತೆಗಳು, ಚಕ್ಷುರಾದಿ ಇಂದ್ರಿಯಾಭಿಮಾನಿ ದೇವತೆಗಳು (ಸಕಲ ತತ್ತ್ವಾಭಿಮಾನಿಗಳೂ) ಒಂದು ಸಾರಿ ಪರಸ್ಪರ ಸ್ಪರ್ಧಿಸಿದರು; ತಾವುಗಳೇ ಸ್ವತಂತ್ರವಾಗಿ ಈ ದೇಹ ಧಾರಣ ಮಾಡುತ್ತೇವೆ ಮತ್ತು ಪ್ರಕಾಶಿಸುತ್ತೇವೆ-ಎಂದು ಉಚ್ಚ ಧ್ವನಿಯಿಂದ ಹೇಳಿದರು. ಒಬ್ಬೊಬ್ಬರೂ ತಾವೂ ಸ್ವತಂತ್ರವಾಗಿ ವಿಷಯಗಳನ್ನು ಪ್ರಕಾಶ ಮಾಡುತ್ತೇವೆ; ಇನ್ನೊಬ್ಬರಲ್ಲ ಎಂಬ ಅಭಿಪ್ರಾಯದಿಂದ ಮಾತನಾಡಿದರು. ॥ 2 ॥

ತಾನ್ ವರಿಷ್ಠಃ ಪ್ರಾಣ ಉವಾಚ । ಮಾ ಮೋಹಮಾಪದ್ಯಥ ಅಹ-
ಮೇವೈತತ್ಪಂಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾ-
ಮೀತಿ । ತೇ ಅಶ್ರದ್ದಧಾನಾ ಬಭೂವುಃ । ಸೋಽಭಿಮಾನಾದೂರ್ಧ್ವ-
ಮುತ್ಕ್ರಮತ ಇವ ತಸ್ಮಿನ್ನುತ್ಕ್ರಾಮತ್ಯಥೇತರೇ ಸರ್ವ ಏವೋತ್ಕ್ರಮಂತೇ ।
ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವ ಏವ ಪ್ರತಿಷ್ಠಂತೇ ॥ 3 ॥

ತಾನ್ ಏವಂ ಅಭಿಮನ್ಯಮಾನಾನ್ ವರಿಷ್ಠಃ ಪ್ರಾಣ ಉವಾಚ। ಕಿಮಿತಿ ? ವಯಮೇವ ಧಾರಕಾಃ ಪ್ರಕಾಶಕಾಶ್ಚ ಇತ್ಯೇವಂವಿಧಂ ಮೋಹಂ ಮಿಥ್ಯಾಜ್ಞಾನಮಾಪದ್ಯಥ ನ ಪ್ರಾಪ್ನುತ । ಕುತೋಽಯಂ ಮೋಹಃ । ಯಸ್ಮಾದಹಮೇವೈತದೇತಸ್ಮಿನ್ ಶರೀರೇ ಪಂಚಧಾ ಪ್ರಾಣಾದಿರೂಪೈಃ ಆತ್ಮಾನಂ ಪ್ರವಿಭಜ್ಯ ಪ್ರವಿಭಕ್ತಂ ಕೃತ್ವಾ ಏತದ್ಬಾಣಮವಷ್ಟಭ್ಯ ವಿಧಾರಯಾಮಿ ಪ್ರಕಾಶಯಾಮಿ ಚೇತಿ। ತತ್ ಶ್ರುತ್ವಾ ತೇ ದೇವಾ ಅಶ್ರದ್ದಧಾನಾ ಅಪ್ರತ್ಯಯವಂತೋ ಭಭೂವುಃ।

**ಕುತಃ ಏತದಿತ್ಥಮಿತಿ । ಸ ಮುಖ್ಯಪ್ರಾಣಃ ತೇಷಾಂ ಪ್ರತ್ಯಾಯನಾಯ । ಅಭಿಮನ್ಯತ ಇತಿ ಅಭಿ-ಮಾನೋ ದೇಹಃ । ತಸ್ಮಾತ್ ಊರ್ಧ್ವಂ ಉತ್ಕ್ರಮತ ಇವ । ಕಿಂಚಿದೂರ್ಧ್ವಂ ಉದಕ್ರಾಮತ್ । ಅಥ ತಸ್ಮಿನ್ ಪ್ರಾಣ ಉತ್ಕ್ರಾಮತಿ ಸತಿ ಇತರೇ ಸರ್ವ ಏವ ಆಕಾಶಾದಿದೇವಾಃ ಶರೀರಧಾರಣಾದೌ ಸ್ವಸ್ಥಿತೌ ಚ ಅಸಾಮರ್ಥ್ಯಾದುತ್ಕ್ರಮಂತೇ । ಉದಕ್ರಮಂತ । ಅಸ್ಯ ಚ ಯಾದೃಚ್ಛಿಕತ್ವಪರಿಹಾರಾಯ ಪುನಃ ತಸ್ಮಿನ್ ಪ್ರಾಣೇ ಪ್ರತಿಷ್ಠಮಾನೇ ಶರೀರ ಏವ ಪ್ರತಿತಿಷ್ಠತಿ ಸತಿ ಸರ್ವೇ ದೇವಾಃ ಪ್ರತಿಷ್ಠಂತೇ ಶರೀರೇ ಪ್ರತ್ಯಾ-ತಿಷ್ಠನ್ ॥ 3 ॥**

ಈ ರೀತಿಯಾಗಿ ಇಂದ್ರಿಯಾಭಿಮಾನಿ ದೇವತೆಗಳು ಕಾದಾಡುತ್ತಿರಲು ಅವರಿಗೆ ತತ್ವವನ್ನು ಅರುಹಲು ಮುಖ್ಯ-ಪ್ರಾಣನು ಹೇಳುತ್ತಾನೆ. ಹೇ ದೇವತೆಗಳಿರಾ – ನೀವು ಈಗ ಮಿಥ್ಯಾಜ್ಞಾನಕ್ಕೆ ವಶರಾಗಿರುವಿರಿ. ನೀವೇ ಈ ಶರೀರ ಧಾರಕರು ಮತ್ತು ಪ್ರಕಾಶಕರೆಂದು ತಿಳಿದಿರುವಿರಿ. ಏಕೆಂದರೆ ಮುಖ್ಯಪ್ರಾಣನಾದ ನಾನೇ ಈ ಶರೀರದಲ್ಲಿ ಪಂಚಪ್ರಾಣಾದಿರೂಪಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿದ್ದು ಕೊಂಡು ಶರೀರಧಾರಕನಾಗಿರುವುದಷ್ಟೇ ಅಲ್ಲದೆ ಪ್ರಕಾಶಕನೂ ಆಗಿರುವೆನು. ಇಷ್ಟು ಹೇಳಿದರೂ ಇಂದ್ರಿಯಾಭಿಮಾನಿ ದೇವತೆಗಳು ಪ್ರಾಣನ ಮಾತಿನಲ್ಲಿ ವಿಶ್ವಾಸ ಇಡಲಿಲ್ಲ, ಉದಾಸೀನ ಮಾಡಿದರು. ಮುಖ್ಯಪ್ರಾಣನ ಶ್ರೇಷ್ಠತ್ವವು ಅವರಿಗೆ ತಿಳಿಯಲಿಲ್ಲ. ಆದ್ದರಿಂದ ಇವರಿಗೆ ಮುಖ್ಯಪ್ರಾಣನ ಮಹತ್ವ ಉತ್ತಮತ್ವವನ್ನು ಬೋಧಿಸಲು ಒಂದು ಉಪಾಯ ಮಾಡಿದನು. ಯಾವ ದೇವತೆಗಳು ತಮ್ಮಿಂದ ಅಭಿಮನ್ಯವಾದ ಶರೀರ ಎಂದು ಭಾವಿಸಿ ಗರ್ವಿಸುತ್ತಿದ್ದರೋ ಆ ಶರೀರದಿಂದ ಪ್ರಾಣನು ಮೆಲ್ಲಕ್ಕೆ ದೇಹದಿಂದ ಹೊರಡಲು ಉದ್ಯುಕ್ತನಾದನು. ಆಗ ಇಂದ್ರಿಯಾಭಿಮಾನಿ ದೇವತೆಗಳು ತಮ್ಮ ತಮ್ಮ ಇಂದ್ರಿಯಗಳನ್ನು ಗಟ್ಟಿಯಾಗಿ ಹಿಡಿದು ನಿಲ್ಲಿಸಲು ಆಗದೆ ತಾವೂ ಸಹ ಪ್ರಾಣನೊಂದಿಗೆ ಹೊರಡಲು ಸಿದ್ಧರಾದರು. ತಾತ್ಪರ್ಯವೆಂದರೆ ಇಂದ್ರಿಯಗಳಾದ ಕಣ್ಣಿನಿಂದ ಸೂರ್ಯ ಉತ್ಕ್ರಾಂತನಾದ ಆದರೂ ಶರೀರ ಪತನವಾಗಲಿಲ್ಲ, ಅವನನ್ನು ಕುರುಡನೆಂದರು.

ತತ್ವವನ್ನು ಪೂಜ್ಯ ಶ್ರೀಪಾದರಾಜರು ಹೀಗೆ ಮನೋಜ್ಞವಾಗಿ ತಿಳಿಸಿರುತ್ತಾರೆ – (1)

ಕರಣಾಭಿಮಾನಿ ಸುರರುಗಳು ದೇಹವ ಬಿಡಲು ।
ಕುರುಡ ಕಿವುಡನು ಮೂಕನೆಂದೆನಿಸುವ ॥
ಪರಮ ಮುಖ್ಯಪ್ರಾಣ ತೊಲಗಲಾ ದೇಹವನು ।
ಅರಿತು ಪೆಣವೆಂದು ಪೇಳ್ವರು ಬುಧಜನರು ॥ (ಮಧ್ವನಾಮ) –3

**ತದ್ಯಥಾ ಮಧುಮಕ್ಷಿಕಾ ಮಧುಕರರಾಜಾನಮುತ್ಕ್ರಾಮಂತಂ ಸರ್ವಾ ಏವೋತ್ಕ್ರಮಂತೇ । ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರತಿಷ್ಠಂತೇ । ಏವಂ ವಾಙ್‌ಮನಶ್ಚಕ್ಷುಃಶ್ರೋತ್ರಂ ಚೇತಿ । ತೇ ಪ್ರೀತಾಃ ಪ್ರಾಣಂ ಸ್ತುನ್ವಂತ್ಯೇಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘ-ವಾನೇಷ ವಾಯುರೇಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥ 4 ॥**

**ತತ್ತತ್ರ ಲೋಕೇ ಯಥಾ ಮಧುಮಕ್ಷಿಕಾ ಮಧುಕರರಾಜಾನಂ ಮಧುಕರಪ್ರಧಾನಂ ಮಧುಸ್ಥಾನಾ-ದುತ್ಕ್ರಾಮಂತಂ ಅನು ಸರ್ವಾ ಏವೋತ್ಕ್ರಮಂತೇ । ತಸ್ಮಿಂಶ್ಚ ಪ್ರತಿಷ್ಠಿತೇ ಸರ್ವಾ ಏವ ಪ್ರತಿಷ್ಠಂತೆ । ಏವಂ ವಾಗಾದಯೋ ದೇವಾ ಇತಿ । ಇತ್ಥಮನ್ವಯವ್ಯತಿರೇಕಾಭ್ಯಾಂ ಪ್ರಾಣಸ್ಯ ವರಿಷ್ಠತ್ವೇಽವಧಾರಿತೇ ಪ್ರೀತಾಸ್ತೇ ದೇವಾಃ ತ್ವಮೇವ ಸರ್ವದೇವಾದಿಷು ಸ್ಥಿತ್ವಾ ತನ್ನಾಮಾ ತದ್ಗುಣಕ್ರಿಯಾದಿಪ್ರವರ್ತಕ ಇತಿ ಪ್ರಾಣಂ ಸ್ತುನ್ವಂತಿ ಅಸ್ತುವನ್ । ತದುಚ್ಯತೇ- ಏಷೋಽಗ್ನಿರಿತ್ಯಾದಿ । ಏಷ ಪ್ರಾಣ ಏವಾಗ್ನಿ ಸಂತಪತಿ । ಏಷ ಏವ ಸೂರ್ಯೋಽಪಿ ಸನ್ ತಪತಿ ಮಘವಾನೇಷ ಏವೇತಿ ಶೇಷಃ । ಪೃಥಿವೀ ರಯಿಶ್ಚ ಯತ್ಸದಸನ್ಮೂರ್ತಂ ಅಮೃತಂ ಮುಕ್ತಜಾತಂ ತದಪ್ಯೇಷ ಏವ ॥ 4 ॥**

ಜೇನುಹುಳುವಿನ ರಾಜ ಹುಳುವು ಗೂಡಿನಿಂದ ಎದ್ದರೆ ಹೇಗೆ ಎಲ್ಲಾ ಜೇನುಗಳೂ ಏಳುತ್ತವೆಯೋ, ಅದು ಮತ್ತೆ ಗೂಡಿಗೆ ಬಂದರೆ ಹೇಗೆ ಎಲ್ಲಾ ಪುನಃ ಬಂದು ಕೂಡುತ್ತವೆಯೋ, ಹಾಗೆ ಮುಖ್ಯಪ್ರಾಣನು ಶರೀರದಿಂದ ಉತ್ಕ್ರಮಣ ಮಾಡಿದರೆ, ಎಲ್ಲಾ ತತ್ತ್ವಾಭಿಮಾನಿ ದೇವತೆಗಳೂ ಅಲ್ಲಿ ಇರಲು ಶಕ್ಯವಿಲ್ಲದೆ ಹೊರಗೆ ಬರುತ್ತಾರೆ. ಪ್ರಾಣನು ಪ್ರವೇಶ ಮಾಡಿದರೆ ಸರ್ವ ದೇವತೆಗಳು ಪ್ರಾಣನನ್ನು ಸ್ವಾಮಿ ನೀನೇ ಸರ್ವ ದೇವತೆಗಳಲ್ಲಿಯೂ ಇದ್ದು ಆಯಾಯ ನಾಮಗಳಿಂದ ಆಯಾಯಾ ಗುಣ ಕ್ರಿಯಾದಿಗಳಿಗೆ ಪ್ರವರ್ತಕನಾಗಿದ್ದೀಯೆಂದು ಸ್ತುತಿಸುತ್ತಾರೆ. ಅಗ್ನಿ, ಸೂರ್ಯ, ಪರ್ಜನ್ಯ, ಇಂದ್ರ ಭೂತ ವಾಯು, ಪೃಥಿವೀ, ಅಭಿಮಾನಿ, ಭಾರತೀದೇವಿ, ಸಕಲ ಮೂರ್ತಾಮೂರ್ತವಸ್ತುಗಳಲ್ಲಿಯೂ ಇದ್ದು ಮುಖ್ಯಪ್ರಾಣನು ಆಯಾ ದೇವತೆಗಳಿಗೆ ಪ್ರವರ್ತಕನಾಗಿದ್ದಾನೆ; ಮುಕ್ತ ವರ್ಗವೂ ಪ್ರಾಣನೇ.

**ವಿಶೇಷ ವಿಷಯ:** ಪ್ರಾಣನು ಮತ್ತು ಇತರ ದೇವತೆಗಳೂ ಏಕ ಶರೀರ ಸ್ಥಿತರಾದ್ದರಿಂದ ಪ್ರಾಣೇತರ ದೇವತೆಗಳು ಒಬ್ಬೊಬ್ಬರೂ ತಾವೇ ಸ್ವತಂತ್ರವಾಗಿ ಕಾರ್ಯ ಮಾಡುತ್ತೇವೆಂದು ಅನ್ಯಥಾ ಜ್ಞಾನವನ್ನು ಹೊಂದಿದ್ದರು, ಅವರಿಗೆ ಯಥಾರ್ಥಜ್ಞಾನ ಬೋಧನೆ ಮಾಡಲು ಪ್ರಾಣನು ಮೇಲೆ ಹೇಳಿದ ಮಹಿಮೆಯನ್ನು ಪ್ರದರ್ಶಿಸುವನು. ಪ್ರಾಣನ ಈ ಅನ್ವಯವ್ಯತಿರೇಕ ವ್ಯಾಪಾರದಿಂದ, ಅವನ ಸಾಮರ್ಥ್ಯವನ್ನು ಅರಿತು ದೇವತೆಗಳು ಪ್ರಾಣನೇ ವರಿಷ್ಠನೆಂದು ಅವನನ್ನು ಸ್ತೋತ್ರ ಮಾಡುತ್ತಾರೆ.

ಇಲ್ಲಿ ವಿವೇಕವೇನೆಂದರೆ – ಮುಖ್ಯ ಪ್ರಾಣನು ಅಗ್ನಿಯಲ್ಲಿದ್ದುಕೊಂಡು ಅಗ್ನಿ ಎಂಬ ನಾಮದಿಂದ ಅಗ್ನಿಕಾರ್ಯವನ್ನು ಅಂದರೆ ತಪನ ಕಾರ್ಯ (ಉಷ್ಣ ಕೊಡುವವನಾಗಿ) ಕರ್ಮ ಮಾಡುವನು.

ಹಾಗೇನೇ ಸೂರ್ಯನಲ್ಲಿ ಪ್ರಕಾಶ ಮಾಡಿ, ಸೂರ್ಯನೆಂಬ ಹೆಸರಿನಿಂದ ಇರುತ್ತಾನೆ. ಪರ್ಜನ್ಯ ಹೆಸರಿನಿಂದಿರುವ ಇಂದ್ರನೆನಿಸಿ ಅವನಲ್ಲಿದ್ದು ತತ್ತನ್ನಾಮಕನಾಗಿ ಮಳೇ ಬರುವಂತೆ ಮಾಡುತ್ತಾನೆ. ಪ್ರವಾಹ ಮಾರುತನಲ್ಲಿದ್ದು ಗಾಳಿ ಬೀಸುವಂತೆ ಮಾಡುತ್ತಾನೆ. ಹೀಗೆ ಮೂರ್ತ (ಪೃಥಿವಿ – ನೀರು – ಅಗ್ನಿ) ವಸ್ತುಗಳಲ್ಲಿ ಮತ್ತು ಅಮೂರ್ತಗಳಾದ (ಆಕಾಶ – ವಾಯು) ವಸ್ತುಗಳಲ್ಲಿದ್ದು ತತ್ ತತ್ ಕಾರ್ಯ ಮಾಡುವವನು ಪ್ರಾಣನೇ – ಅಂತೆಯೇ ಮುಕ್ತ ಜೀವರುಗಳಲ್ಲಿಯೂ ಸಹ ಪ್ರಾಣನೇ ಕಾರ್ಯ ಮಾಡುತ್ತಾನೆ.

**ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಮ್ । ಋಚೋ**
**ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಚ ಬ್ರಹ್ಮ ಚ । ಪ್ರಜಾಪತಿ-**

**ಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ । ತುಭ್ಯಂ ಪ್ರಾಣ ಪ್ರಜಾ-ಸ್ತ್ವಿಮಾ ಯತ್ಪ್ರಾಣೈಃ ಪ್ರತಿತಿಷ್ಠಸಿ । ದೇವಾನಾಮಸಿ ವಹ್ನಿತಮಃ ಪಿತೄಣಾಂ ಪ್ರಥಮಾ ಸ್ವಧಾ । ಋಷೀಣಾಂ ಚರಿತಂ ಸತ್ಯಮಥರ್ವಾಂಗಿರಸಾ-ಮಪಿ ॥ 5 ॥**

ಉಪನಿಷತ್ ಮಂತ್ರದಲ್ಲಿ ''ಏಷಃ ಅಗ್ನಿಃ – ಏಷ ಸೂರ್ಯಃ ॥ ಎಂದು ತಿಳಿಸುತ್ತದೆ. ಅಲ್ಲಿ ಪ್ರಾಣನೂ ಅಗ್ನಿ, ಪ್ರಾಣನು ಸೂರ್ಯ ಎಂಬುದರಿಂದ – ಪ್ರಾಣ ಅಗ್ನಿ , ಪ್ರಾಣ ಸೂರ್ಯಾದಿಗಳಿಗೆ ಅಭೇದ ಜ್ಞಾನವು ಉಂಟಾಗುವ ಸಂಭವವಿದೆ. ಅಂದ ಮೇಲೆ ಪ್ರಾಣನೂ ಅವರಲ್ಲಿದ್ದು ಪ್ರೇರಣಾದಿ ಕರ್ಮ ಮಾಡುತ್ತಾನೆ ಎಂಬುದು ಉಲ್ಲೇಖವಿಲ್ಲ ಎಂಬ ಶಂಕಾಪರಿಹಾರ ಮಾಡುತ್ತಾ ಶ್ರೀ ಮತ್‌ಜ್ಜಯತೀರ್ಥರು – ''ಕಥಂ ಏತತ್ಸರ್ವಂ ಪ್ರಾಣಃ'' ಪ್ರಾಣನೇ ಹೇಗೆ ಅಗ್ನಿ ಸೂರ್ಯಾದಿಗಳಾಗಿ-ರುತ್ತಾನೆ ಎಂದು ಆಕ್ಷೇಪಿಸಿ ಉತ್ತರವನ್ನು ತಿಳಿಸುತ್ತಾ ಮೇಲೆ ಹೇಳಿದ ರೀತಿಯಲ್ಲಿ ತತ್ತತ್ ದೇವತೆಗಳಲ್ಲಿ ಪ್ರತಿಷ್ಠಿತನಾಗಿ ಕಾರ್ಯಗಳನ್ನು ಮಾಡಿಸುತ್ತಾನೆಂದೇ ತಿಳಿಯಬೇಕು.

**ಕಥಂ ಏತತ್ಸರ್ವಂ ಪ್ರಾಣ ಏವ ಇತ್ಯತ ಉಕ್ತಂ ವಕ್ಷಮಾಣಂ ಚ ವಿವ್ರಿಯತೆ- ಅರಾಃ ಇತಿ ॥ ತಸ್ಮಾತ್ ಸರ್ವಂ ಪ್ರಾಣ ಉಚ್ಯತೇ ಇತಿ ಶೇಷಃ ॥ ಪರೋಕ್ಷತಯಾ ಸ್ತುತೋ ಅಪರೋಕ್ಷತಯಾ ಸ್ತೂಯತೇ- ಪ್ರಜಾಪತಿಶ್ಚರಸಿ ಇತ್ಯಾದಿ । ಪ್ರಜಾಪತಿಃ ದಕ್ಷಾದಿಃ ತ್ವಮೇವ ಗರ್ಭೇ ಚರಸಿ । ಗರ್ಭಸ್ಥ-ಪ್ರೇರಕತಯಾ ತ್ವಮೇವ ಚರಸಿ ಪ್ರತಿಜಾಯಸೇ । ಜನಿಕ್ರಿಯಾಂ ಚ ತ್ವಮೇವ ಕರೋಷಿ । ಹೇ ಪ್ರಾಣ ಇಮಾ ದೇವಾದ್ಯಾಃ ಪ್ರಜಾಃ ತುಭ್ಯಂ ತ್ವದೀಯಾಃ । ಕುತಃ ಯದ್ಯಸ್ಮಾತ್ ತ್ವಂ ಪ್ರಾಣೈಃ ಚಕ್ಷುರಾದಿಭಿಃ ಸಹ ಧಾರಣಾದಿ ಕುರ್ವನ್ ಶರೀರೇ ಪ್ರತಿತಿಷ್ಠಸಿ ತಸ್ಮಾತ್ । ನ ಕೇವಲಂ ತಪನಕ್ರಿಯಾವಾನಗ್ನಿಃ ಪ್ರಾಣಃ । ಕಿಂತು ? ಉಚ್ಯತೇ- ದೇವಾನಾಮಿತಿ । ತ್ವಂ ದೇವಾನಾಂ ವಹ್ನಿತಮೋ ಯಜ್ಞಭಾಗವಾಹಕತಮೋಽಸಿ । ಪಿತೄಣಾಂ ಪ್ರಥಮಾ ಸ್ವಧಾ ಮುಖ್ಯಸ್ವಧಾವಾಹಕೋಽಪಿ ತ್ವಮೇವ ಅಸಿ । ತ್ವಮೇವ ಅಥರ್ವಾಂಗಿರಸಾಂ ಋಷೀಣಾಂ ಚರಿತಮಾಚಾರಃ ಸತ್ಯವಚನಂ ಚ ಅಸಿ ॥ 5 ॥**

ರಥವು ಚಕ್ರದ ಸಹಾಯದಿಂದ ಚಲಿಸುತ್ತದೆ. ಆದರೆ ರಥದ ಚಕ್ರದ ಮಧ್ಯದಲ್ಲಿ ಮಂಡನೆ ಎಂಬ ದಪ್ಪನಾದ ಮರವು ಇರುವುದು. ಇದನ್ನು ''ನಾಭಿ'' ಅಥವಾ ''ಗುಂಪು'' ಎನ್ನಲಾಗುವುದು. ಮಂಡನೆಗೂ ಚಕ್ರಕ್ಕೂ ಅರೇ ಕಾಲುಗಳಿಂದ ಬಿಗಿಯಲ್ಪಟ್ಟಿರುತ್ತದೆ. ತಸ್ಮಾತ್ ಈ ರಥನಾಭಿಯು ಇಡೀ ರಥದ ಭಾರವನ್ನು ಹೊರುತ್ತಾ ಆ ಕಾಲುಗಳು ಆಶ್ರಿತವಾಗಿರುವುದು.

**ಭಾವಾರ್ಥ** – ರಥ ಚಕ್ರದ ಗುಂಭದಲ್ಲಿ ಹೇಗೆ ಚಕ್ರದ ಅರೆಗಾಲುಗಳು ಆಶ್ರಯ ಪಡೆದಿರುತ್ತವೇ ಹಾಗೆ, ಸರ್ವ ದೇವತೆಗಳೂ ಈ ಶರೀರದಲ್ಲಿ ಮುಖ್ಯಪ್ರಾಣನ ಆಶ್ರಯಪಡೆದು ಉಪಸ್ಥಿತರಾಗಿದ್ದಾರೆ. ಋಗಾದಿ ವೇದಗಳೂ, ಬ್ರಾಹ್ಮಣಾದಿ ವರ್ಣಗಳೂ ಇವನ ಅಧೀನವೇ ಆಗಿವೆ. ಗರ್ಭದಲ್ಲಿ ಸಂಚರಿಸಿ ಪ್ರೇರಕನಾಗಿ ಜನಿಕ್ರಿಯೆ ಮಾಡುವವನು ಪ್ರಾಣನೇ. ದೇವತೆಗಳಿಗೆ ಅತಿಶಯವಾಗಿ ಯಜ್ಞವಾಹಕನೂ, ಪಿತೃಗಳಿಗೆ ಅರ್ಪಣೆ ಮಾಡುವ ಅನ್ನೋದಕಗಳನ್ನು ಸ್ವಧಾಕಾರ ಎಂದು ತಲಪಿಸುವವನು ಪ್ರಾಣನೇ ಅಂಗಿರಸಾದಿ ಋಷಿಗಳ ಆಚಾರ, ಸತ್ಯ ವಚನಗಳೆಲ್ಲವೂ ಪ್ರಾಣನ ಅಧೀನವೇ ಆಗಿದೆ.

**ವಿಶೇಷ ವಿಷಯ :** ಇಲ್ಲಿ ಋಕ್, ಯಜು, ಸಾಮವೆಂದು ಮೂರನ್ನೇ ಹೇಳಿದ್ದರೂ, ಅಥರ್ವಣ ವೇದವನ್ನೂ ಉಪಲಕ್ಷಣದಿಂದ ತೆಗೆದುಕೊಳ್ಳಬೇಕು – ತ್ರಯೀ ನ ಶ್ರುತಿಗೋಚರಾ ಎನ್ನುವಂತೆ

2) ವಹ್ನಿತಮ : ಅತಿಶಯಾರ್ಥದಲ್ಲಿ ವಹ್ನಿ ಶಬ್ದದ ಜೊತೆ ತಮಪ್ ಪ್ರತ್ಯಯವಿದೆ. ಅಲ್ಲದೆ, ವಹ ಪ್ರಾಪಣ ಎಂಬ ಧಾತು ರೂಪದಿಂದ ವಕಾರ ಹಕಾರಗಳ ಮಧ್ಯದಲ್ಲಿ ಹಿನುಪ್ ಪ್ರತ್ಯಯ ಬಂದು ವಹ್ನಿ ಎಂದಾಗಿದೆ. ಈ ರೂಪ ಶಬ್ದನಿಷ್ಪತ್ತಿಯಂತೆ ಯಜ್ಞಭಾಗ ವಾಹಕತಮಃ ಎಂದು ವ್ಯಾಖ್ಯಾನ ಮಾಡಿದೆ ॥ 5 ॥

**ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ । ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ । ಯದಾ ತ್ವಮಭಿವರ್ಷಸ್ಯ-ಥೇಮಾಃ ಪ್ರಾಣ ತೇ ಪ್ರಜಾಃ । ಆನಂದರೂಪಾಸ್ತಿಷ್ಠಂತಿ ಕಾಮಾಯಾನ್ನಂ ಭವಿಷ್ಯತೀತಿ । ವ್ರಾತ್ಯಸ್ತ್ವಂ ಪ್ರಾಣೈಕಋಷಿರತ್ತಾ ವಿಶ್ವಸ್ಯ ಸತ್ಪತಿಃ । ವಯ-ಮದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವನಃ ॥ 6 ॥**

ಹಿಂದೆ 4ನೇ ಮಂತ್ರದಲ್ಲಿ ಮಘಮನ್ ಎಂದೇನು ಹೇಳಲ್ಪಟ್ಟಿದೆ, ಅದರ ವಿವರಣವು. ಈಗ ಪ್ರಾಣ, ನೀನು ಇಂದ್ರನು ಎಂದು ಹೇಳಿ ನೀನು ತೇಜಸ್ಸಿನಿಂದ ಕೂಡಿರುವೆ ಎಂದರು.

**ಇಂದ್ರಸ್ತ್ವಮಿತಿ ಮಘವಾನಿತ್ಯುಕ್ತವಿವರಣಮ್ । ತೇಜಸಾ ಯುಕ್ತ ಇತಿ ಶೇಷಃ । ವಾಯುರಿತ್ಯಸ್ಯ ತ್ವಮಂತರಿಕ್ಷೇ ಚರಸೀತಿ ವಿವರಣಮ್ । ನ ಕೇವಲಂ ಸೂರ್ಯಸ್ಯ ತಾಪಕತ್ವಂ ಪ್ರಾಣಾಧೀನಮ್ । ಕಿಂತು ಜ್ಯೋತಿಷಾಂ ಗ್ರಹಾಣಾಂ ಪತಿತ್ವಂ ಚ । ಪರ್ಜನ್ಯತ್ವವಿವರಣಮ್- ಯದೇತಿ । ಹೇ ಪ್ರಾಣ ! ಯದಾ ತ್ವಂ ಪರ್ಜನ್ಯರೂಪೋಽಭಿವರ್ಷಸಿ । ಅಥ ತದಾ ತೇ ತ್ವದೀಯಾಃ ಇಮಾಃ ಮಾನುಷಾದಿಪ್ರಜಾಃ ಕಾಮಾಯ ಯಥೇಷ್ಟಂ ಅನ್ನಂ ಭವಿಷ್ಯತೀತಿ ನಿಶ್ಚಿತ್ಯ ಆನಂದರೂಪಾಃ ಆನಂದವತ್ಯಃ ತಿಷ್ಠಂತಿ । ಹೇ ಪ್ರಾಣ ವಾಯೋಃ ವ್ರಾತ್ಯಃ ವ್ರತನಿಷ್ಠಃ ಏಕರ್ಷಿಃ ಅಥರ್ವವೇದದ್ರಷ್ಟಾ ಅಸಿ । ವಿಶ್ವಸ್ಯಾತ್ತಾ ಯಮಾದಿಶ್ಚ ತ್ವಮಸಿ । ಸತಾಂ ಪತಿಃ ಸಂಶ್ಚಾಸೌ ಪತಿಶ್ಚೇತಿ ವಾ ಸತ್ಪತಿಃ ತ್ವಮೇವ । ವಯಂ ತವಾದ್ಯಸ್ಯ ಭೋಜ್ಯಸ್ಯ ದಾತಾರಃ ತ್ವತ್-ಪೂಜಕಾ ಇತಿ ಯಾವತ್ । ಕುತಃ ಹೇ ಮಾತರಿಶ್ವ ಮಾತರಿಶ್ವನ್ ತ್ವಂ ನೋಽಸ್ಮಾಕಂ ಪಿತಾಸಿ । ಮಾತ-ರಿಶ್ವನೋ ಭೂತವಾಯೋಃ ಪಿತೇತಿ ವಾ ॥ 6 ॥**

ಭಾವಾರ್ಥ: ಹೇ ಪ್ರಾಣನೇ, ನೀನೇ ಇಂದ್ರನು, ರುದ್ರನು, ಭೂತವಾಯುವು (ಆಕಾಶದಲ್ಲಿ ಸಂಚರಿಸುತ್ತೀಯೆ), ರಕ್ಷಕನು, ಸಕಲಗ್ರಹಗಳಿಗೂ ಸ್ವಾಮಿಯು, ನೀನು ಪರ್ಜನ್ಯ ರೂಪದಿಂದ ಮಳೆಗರಿಸವಾಗ, ಮಾನುಷಾದಿ ಪ್ರಜೆಗಳು ಇನ್ನು ತಮಗೆ ಯಥೇಷ್ಟವಾಗಿ ಅನ್ನ (ಆಹಾರಾದಿಗಳು) ದೊರಕುವುದೆಂದು ನಿಶ್ಚಯಿಸಿ, ಆನಂದದಿಂದಿರುತ್ತಾರೆ. ನೀನು ಅಥರ್ವವೇದ ದ್ರಷ್ಟನಾದ ಏಕರ್ಷಿಯು, ಸಜ್ಜನರಿಗೆ ಸ್ವಾಮಿ, ಸರ್ವಸಂಹಾರಕರ್ತನಾದ ಯಮನಲ್ಲಿ ಇದ್ದು ಯಮನೆಂದೆನಿಸಿಕೊಂಡಿರುವೆ, ನಾವು ನಿನಗೆ ಹವಿಸ್ಸೇ ಮೊದಲಾದ ಭೋಜ್ಯಗಳನ್ನು ಸಮರ್ಪಿಸುವ ಪೂಜಕರು, ಪರಿಚಾರಕರು, ನೀವೇ ನಮಗೆ ರಕ್ಷಕನಾದ ತಂದೆಯು ॥ 6 ॥

**ವಿಶೇಷ ವಿಷಯ:**

1) ಆಯಾಯ ದೇವತೆಗಳಿಗೆ ಆಶ್ರಯನಾಗಿಯೂ, ಅಂತರ್ಯಾಮಿಯಾಗಿ ಪ್ರೇರಕನಾಗಿರುವದರಿಂದಲೂ, ಪ್ರಾಣನನ್ನು, ಆಯಾಯ ದೇವತೆಗಳ ಹೆಸರಿನಿಂದಲೇ ಸ್ತೋತ್ರ ಮಾಡುತ್ತಾರೆ; ದೇವತೆಗಳಿಗೂ ಪ್ರಾಣನಿಗೂ ಅಭೇದವನ್ನು ಚಿಂತಿಸಬಾರದು; ಸೂರ್ಯನಲ್ಲಿರುವ ತಾಪನಾದಿ ಶಕ್ತಿ ಮಾತ್ರ ಅವನ ಅಧೀನವೆಂದು ತಿಳಿಯಬಾರದು; ಪ್ರಾಣನು ಜ್ಯೋತಿಷ್ಮಂಡಲದಲ್ಲಿಯ ಸಕಲಸಂಗ್ರಹಗಳಿಗೂ ಪತಿಯು.

2) ಯದಾ ತ್ವದಮಭಿವರ್ಷಸ್ಯಥೇಮಾಃ ಪ್ರಾಣ ತೇ ಪ್ರಜಾಃ – ಎಂದು ಪರ್ಜನ್ಯರೂಪದಿಂದ ಮಳೆಗರೆಯಿ–ಸುತ್ತೀಯೇ – ಎಂದಿರುವುದರಿಂದ ಪರಂ ಪೃ ಪಾಲನಪೂರಣಯೋಃ ಎಂಬ ಧಾತು ರೂಪದಿಂದ ಪರಪೋಷಕ ಜಲಜನನ ಯೋಗ್ಯಃ ಪರ್ಜನ್ಯನು ಎಂದು ಸೂಚಿತವಾಯಿತು.

**ಯಾ ತೇ ತನೂರ್ವಾಚಿ ಪ್ರತಿಷ್ಠಿತಾ ಯಾ ಶ್ರೋತೇ ಯಾ ಚ ಚಕ್ಷುಷಿ ।**
**ಯಾ ಮನಸಿ ಸಂತತಾ ಶಿವಾಂ ತಾಂ ಕುರು ಮೋತ್ಕ್ರಮೀಃ ॥ ಪ್ರಾಣ–**
**ಸ್ಯೇತದ್ ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಮ್ । ಮಾತೇವ ಪುತ್ರಾನ್**
**ರಕ್ಷಸ್ವ ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥ 7 ॥**

**ಏವಂ ಸ್ತುತ್ವಾ ಪ್ರಕೃತಂ ತೂಚ್ಯತೇ– ಯಾ ತ ಇತ್ಯಾದಿ । ಯಾ ತೇ ತ್ವದೀಯಾ ತನೂರ್ಮೂರ್ತಿಃ ವಾಚಿ ಪ್ರತಿಷ್ಠಿತಾ ಯಾ ಶ್ರೋತ್ರೇ ಯಾ ಚ ಚಕ್ಷುಷಿ ಯಾ ಮನಸಿ ಸಂತತಾ । ಸಮ್ಯಗ್ ವ್ಯಾಪ್ಯ ವರ್ತಮಾನಾ । ಏವಮನ್ಯೇಷು ತತ್ತ್ವೇಷು ಯಾ ಪ್ರತಿಷ್ಠಿತಾ ತಾಂ ಶಿವಾಂ ಶಾಂತಾಂ ಕುರು । ಮೋತ್ಕ್ರಮೀಃ । ವಾಗಾದಿಭ್ಯಃ ತಥೋತ್ಕ್ರಮಣಂ ಮಾ ಕುರು । ವಾಗಾದಿಷು ಪ್ರಾಣಸ್ಯ ಪ್ರತಿಷ್ಠಿತತ್ವಂ ಕುತಃ ? ಯತ ಏತತ್ಸರ್ವಂ ವಾಗಾದಿಕಂ ಪ್ರಾಣಸ್ಯ ತವ ವಶೇ ವರ್ತತೇ ನ ತ್ವಾಂ ವಿನಾ ಪ್ರವರ್ತಿತುಂ ಕ್ಷಮಮ್ । ನ ಕೇವಲಮಧ್ಯಾತ್ಮಮ್ । ಕಿಂತು ತ್ರಿದಿವೇ ಸ್ವರ್ಗೇ ಯತ್ಪ್ರತಿಷ್ಠಿತಂ ಅಧಿದೈವಾದಿಕಂ ಚೇತಿ ಯಾವತ್ । ವಾಗಾದಿಷು ಸ್ಥಿತ್ವಾ ತ್ವಮಸ್ಮಾನ್ಮಾತಾ ಪುತ್ರಾನಿವ ರಕ್ಷಸ್ವ ಪಾಲಯ । ಶ್ರೀಃ ಶ್ರಿಯಂ ಪ್ರಜಾಧಾರಣಶೋಭಾಮಿತಿ ಯಾವತ್ । ಪ್ರಜ್ಞಾಂ ಪ್ರಜ್ಞಾನಂ ಪ್ರಕಾಶಕತ್ವಶಕ್ತಿಂ ನೋಽಸ್ಮಾಕಂ ವಿಧೇಹಿ ಕುರು । ಇತಿ ಸ್ತುನ್ವಂತೀತಿ ಸಂಬಂಧಃ ॥ 8 ॥**

*॥ ಇತಿ ದ್ವಿತೀಯಪ್ರಶ್ನಃ ॥*

ತಾತ್ಪರ್ಯ – ಸಕಲ ಇಂದ್ರಿಯಗಳಲ್ಲಿ ಪ್ರಾಣನ ಮೂರ್ತಿಯು ಪ್ರತಿಷ್ಠಿತವಾಗಿರುವದರಿಂದಲೇ, ಅವುಗಳು ತಮ್ಮ ತಮ್ಮ ಶಕ್ತಿಗಳಿಂದ ಕಾರ್ಯ ಮಾಡುತ್ತವೆ; ಇಲ್ಲದಿದ್ದರೆ ಕುಂಠಿತವಾಗುತ್ತವೆ. ಆದ್ದರಿಂದಲೇ ದೇವತೆಗಳು ಪ್ರಾಣನನ್ನು ತತ್ವಾದಿಗಳಿಂದ ಉತ್ಕ್ರಮಣ ಮಾಡಬೇಡವೆಂದು ಪ್ರಾರ್ಥಿಸುತ್ತಾರೆ. ಹೀಗೆ ಆಧ್ಯಾತ್ಮದಲ್ಲಿ ಅಷ್ಟೇ ಅಲ್ಲ; ಆಧಿದೈವಾದಿಗಳೂ ಪ್ರಾಣನ ಅಧೀನವೇ ಆಗಿರುತ್ತವೆ. ದೇವಲೋಕವಾದ ಸ್ವರ್ಗವೂ ಪ್ರಾಣನಿಂದ ಅಧಿಷ್ಠಿತವಾಗಿದೆ. ತಾಯಿ ಮಕ್ಕಳನ್ನು ಹೇಗೆ ರಕ್ಷಿಸುವಳೋ, ಹಾಗೆ ಪ್ರಾಣನು ನಮ್ಮನ್ನು ರಕ್ಷಣೆ ಮಾಡಲಿ; ಸಕಲ ಮಂಗಳವನ್ನು ಕೊಡಲಿ; ಪ್ರಜ್ಞಾನವನ್ನು ಪ್ರಕಾಶಕತ್ವ ಶಕ್ತಿಯನ್ನೂ ಕೊಟ್ಟು ಸಂರಕ್ಷಿಸಲಿ – ಎಂದು ದೇವತೆಗಳು ಪ್ರಾಣನನ್ನು ಪ್ರಾರ್ಥಿಸುತ್ತಾರೆ ॥

ಯಸ್ಯ ಸತ್ತಾ ಯದಿಧೀನ ತತ್ತದೇವೇತಿ ಭಣ್ಯತೇ - ಎಂಬ ನ್ಯಾಯಾನುಸಾರವಾಗಿ ಇಂದ್ರ, ಅಗ್ನಿ ದೇವತೆಗಳು ಮುಖ್ಯಪ್ರಾಣನ ಅಧೀನರೇ ಆಗಿದ್ದಾರೆ. ಆದ್ದರಿಂದ ಅವನನ್ನು ಆಯಾಯಾ ನಾಮದಿಂದಲೇ ದೇವತೆಗಳು ಸ್ತೋತ್ರ ಮಾಡಿದ್ದಾರೆ.

ಸಕಲನಾಮಗಳೂ ಪ್ರವೃತ್ತಿ ನಿಮಿತ್ತೇನ ಪರಮ ಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಬೋಧಿಸುತ್ತವೆ. ಮುಖ್ಯವೃತ್ತಿಯಿಂದ ಮುಖ್ಯಪ್ರಾಣನನ್ನೂ ಅಮುಖ್ಯವೃತ್ತಿಯಿಂದ ತತ್ತದಭಿಮಾನಿ ದೇವತೆಗಳನ್ನೂ ಬೋಧಿಸುತ್ತವೆಯೆಂದು ತಿಳಿಯಬೇಕು.

ಎಲೋ ವೈದರ್ಭಿಯೇ ಹಿಂದೆ ನಿನಗೆ ತಿಳಿಸಿದಂತೆ ಆಕಾಶಾದಿ ದೇವತೆಗಳು ಪ್ರಜಾಧಾರಕರಾದರು. ಅತ್ಯುತ್ತಮನಾದವನು ಮುಖ್ಯಪ್ರಾಣನೇ ಎಂದು ಅವರೆಲ್ಲಾ ತಿಳಿದರು. ಈ ವಿಷಯವನ್ನು ದೃಷ್ಟಾಂತಸಹಿತವಾಗಿ ನಿನಗೆ ತಿಳಿಸಿರುವೆನು ಎಂದು ಪಿಪ್ಪಲಾದರು ಎರಡನೇ ಪ್ರಶ್ನೆಗೆ ಉತ್ತರವಾಗಿ ತಿಳಿಸಿದರು.

*ಇಲ್ಲಿಗೆ ಎರಡನೇ ಪ್ರಶ್ನೆಯು ಮುಗಿಯಿತು.*

★ ★ ★

# ಅಥ ತೃತೀಯಪ್ರಶ್ನಃ

**ಅಥ ಹೈನಂ ಕೌಸಲ್ಯಸ್ಚಾಶ್ವಲಾಯನಃ ಪಪ್ರಚ್ಛ । ಭಗವನ್ ಕುತ ಏಷ ಪ್ರಾಣೋ ಜಾಯತೇ । ಕಥಮಾಯಾತ್ಯಸ್ಮಿಂಚ್ಛರೀರೇ । ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರತಿಷ್ಠತೇ । ಕೇನೋತ್ಕ್ರಮತೇ ಕಥಂ ಬಾಹ್ಯಮಭಿಧತ್ತೇ ಕಥಮಧ್ಯಾತ್ಮಮಿತಿ ॥ 1 ॥**

ಅಥ ಹೈನಂ ಕೌಸಲ್ಯಃ । ಪ್ರಾಗುಕ್ತಂ ಪರಮೇಶ್ವರೋಽಖಿಲಜಗಜ್ಜನ್ಮಾದಿಕರ್ತೇತ್ಯಾದಿ ತದ್ವಿವರಣಾರ್ಥೋಽಯಮುತ್ತರೋ ಗ್ರಂಥಃ । ಭಗವನ್ ಕುತಃ ಕಸ್ಮಾತ್ಪುರುಷಾದೇವಂ ಉಕ್ತಲಕ್ಷಣಃ ಪ್ರಾಣೋ ಜಾಯತೇ । ಸ ಮಿಥುನಮುತ್ಪಾದಯತೇ ರಯಿಂ ಚ ಪ್ರಾಣಂ ಚೇತ್ಯುಕ್ತಮಪಿ ಪರಮೇಶ್ವರಾತ್ ಜನ್ಮೈವಮಾಧ್ಯಸ್ಯ ಕಥಂ ಸಂಭವತೀತ್ಯಭಿಪ್ರಾಯಃ । ಅಹಮೇವೈತತ್ಪಂಚಧಾತ್ಮಾನಂ ಪ್ರವಿಭಜ್ಯೈತತ್ಪ್ರಾಣಮವಷ್ಟಭ್ಯ ವಿಧಾರಯಾಮೀತ್ಯುಕ್ತಮ್ । ತತ್ರ ಕಥಂ ಕಸ್ಮಾತ್ಕಾರಣಾತ್ ಅಸ್ಮಿನ್ ಶರೀರೇ ಪ್ರಾಣ ಆಯಾತಿ ಪ್ರವರ್ತತೇ । ಆತ್ಮಾನಂ ಪ್ರವಿಭಜ್ಯ ಕಥಂ ಪ್ರತಿಷ್ಠತೇ ಪ್ರತಿತಿಷ್ಠತಿ । ಕೇ ತೇ ಪ್ರವಿಭಾಗಾಃ ತೈಶ್ಚ ಕಿಂ ಕುರ್ವನ್ ಕುತ್ರ ಸ್ಥಾನವಿಶೇಷೇ ತಿಷ್ಠತೀತಿ ಯಾವತ್ । ತಸ್ಮಿನ್ನುತ್ಕ್ರಾಂತೇ ಸರ್ವಽಪ್ಯುತ್ಕ್ರಾಂತಾ ಇತ್ಯುಕ್ತಮ್ । ತತ್ರ ಕೇನ ಪ್ರವಿಭಾಗೇನ ಜೀವಾದೀನಾದಾಯೋತ್ಕ್ರಾಮತಿ । ಪ್ರಾಣಸ್ಯೈತದ್ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಮಿತ್ಯುಕ್ತಮ್ । ತತ್ರ ಕಥಂ ಕೇನ ರೂಪೇಣ ಬಾಹ್ಯಮಧಿಭೂತಾದಿಕಮಭಿಧತ್ತೇ ಧಾರಯತಿ । ಕಥಂ ಚಾಧ್ಯಾತ್ಮಮಭಿಧತ್ತೇ ॥ 1 ॥

**ಟೀಕಾ-ಖಂಡಾರ್ಥ-ಭಾವಾನುವಾದ-**

1) ಸಕಲಜೀವ ಜಡಾತ್ಮಕ ಪ್ರಪಂಚದ ಉತ್ಪತ್ತಿ ಕರ್ತೃತ್ವವು ಭಗವಾನ್ ನಾರಾಯಣನಿಗೆ ಮಾತ್ರ ಉಂಟು; ಅನ್ಯರಿಗೆ ಇಲ್ಲ - ಎಂಬ ಗುರುಗಳ ಉತ್ತರವನ್ನು ಕೇಳಿದ ಕೌಸಲ್ಯ ಆಶ್ವಲಾಯನರು ಜೀವೋತ್ತಮನಾದ ಮುಖ್ಯ ವಾಯುವಿಗೆ ವಾಸುದೇವನು ಹೇಗೆ ಕಾರಣನಾಗುವನು ಎಂದು ಪ್ರಶ್ನಿಸುತ್ತಾರೆ:-

2) ಅಹಮೇವೈತತ್ ಪಂಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮಿ (2-3) ಎಂದು ಹೇಳಿದಿರಿ. ಹೇಗೆ ಯಾವ ಕಾರಣದಿಂದ ಪ್ರಾಣನು ಈ ಶರೀರದಲ್ಲಿ ಬರುತ್ತಾನೆ? ಬಂದು ಪ್ರವರ್ತನಾಗುತ್ತಾನೆ? ಹೇಗೆ ತನ್ನನ್ನು ವಿಭಾಗಿಸಿಕೊಂಡು ಶರೀರದ ಯಾವ ಭಾಗಗಳಲ್ಲಿ ಹೇಗೆ ಸ್ಥಿತನಾಗುತ್ತಾನೆ?

3) ತಸ್ಮಿನ್ನುತ್ಕ್ರಾಂತೆ ಸರ್ವೇಽಪ್ಯುತ್ಕ್ರಾಂತಾಃ (2-3) ಎಂದಿರಿ. ಯಾವ ಪ್ರವಿಭಾಗದಿಂದ ಜೀವಾದಿಗಳನ್ನು ತೆಗೆದುಕೊಂಡು ಉತ್ಕ್ರಮಣ ಮಾಡುತ್ತಾನೆ?

4) ಪ್ರಾಣಸ್ಯೆತದ್ವಶೆ ಸರ್ವಂ ತ್ರಿದಿವೆ ಯತ್ಪ್ರತಿಷ್ಠಿತಂ (2-3) ಎಂದಿರಿ. ಯಾವ ರೂಪದಿಂದ ಅಧಿಭೂತಾದಿಗಳನ್ನು ಪ್ರಾಣನು ಧಾರಣೆ ಮಾಡುತ್ತಾನೆ?

5) ಯಾವ ರೂಪದಿಂದ ಅಧ್ಯಾತ್ಮವನ್ನು ಧಾರಣೆ ಮಾಡುತ್ತಾನೆ. ಈ ನನ್ನ ಪ್ರಶ್ನೆಗಳಿಗೆ ತಾವು ಉತ್ತರ ನೀಡಬೇಕೆಂದು ತಾತ್ಪರ್ಯ ॥ 1 ॥

**ತಸ್ಮೈ ಸ ಹೋವಾಚ । ಅತಿಪ್ರಶ್ನಾನ್ ಪೃಚ್ಛಸಿ ಬ್ರಹ್ಮಿಷ್ಠೋಽಸೀತಿ ।**
**ತಸ್ಮಾತ್ ತೇಽಹಂ ಬ್ರವೀಮಿ । ಆತ್ಮತ ಏಷ ಪ್ರಾಣೋ ಜಾಯತೆ ।**
**ಯಥೈಷಾ ಪುರುಷೇಚ್ಛಾಯಾ ಏತಸ್ಮಿನ್ನೇತದಾತತಮ್ ॥ 2 ॥**

**ಇತ್ಯೇವಂ ಪೃಷ್ಟವತೇ ತಸ್ಮೈ ಸ ಹೋವಾಚ । ಯಸ್ಮಾದೇವಂ ತ್ವಮಪಿ ಪ್ರಶ್ನಾನತಿಶಯಿತಾನ್ ಪ್ರಷ್ಟವ್ಯಾರ್ಥಾನ್ ಪೃಚ್ಛಸಿ ತಸ್ಮಾತ್ ತ್ವಂ ಬ್ರಹ್ಮಿಷ್ಠೋ ವೇದವಿಚಾರಾದಿಮಾನಸಿ । ನ ಹ್ಯನ್ಯಥೈವಂವಿಧಾಃ ಪ್ರಶ್ನಾಃ ಸಂಭವಂತೀತಿ । ಯಸ್ಮಾದ್ಬ್ರಹ್ಮಿಷ್ಠೋಽಸಿ ತಸ್ಮಾದಹಂ ತೇ ತುಭ್ಯಂ ಉತ್ತರಂ ಬ್ರವೀಮೀತಿ । ತಂ ಪ್ರಶ್ನಸ್ಯಾದ್ಯಪ್ರಶ್ನೋತ್ತರಮುಚ್ಯತೇ- ಆತ್ಮನ ಇತಿ । ಪರಮಾತ್ಮತ ಇತ್ಯರ್ಥಃ । ಏಷ ಏವಂ ಮಹಾ-ಮಹಿಮೋಽಪಿ ಪ್ರಾಣ ಆತ್ಮನೋ ಜಾಯತೇ । ತತ್ಕಥಂ ? ಯಥೈಷಾ ಛಾಯಾ ಪುರುಷೇ ಶರೀರೇ ಆತತಾ ಅತ್ಯಂತಂ ಶರೀರಾಧೀನಾ ವರ್ತತೇ । ಏವಮೇವೈತಸ್ಮಿನ್ ಆತ್ಮನಿ ಏತತ್ಸರ್ವಂ ಪ್ರಾಣಾದಿಕ-ಮಾತತಮ್ । ಪ್ರಾಣಾದಪಿ ಆಢ್ಯತಮತ್ವಾತ್ ಪರಮಾತ್ಮನಃ ತತಃ ಪ್ರಾಣಸ್ಯ ಸ್ವಜನ್ಮ ಸಂಭವತ್ಯೇವ ಇತ್ಯಭಿಪ್ರಾಯಃ ॥ 2 ॥**

ಭಾವಾನುವಾದ : ಕೌಸಲ್ಯರ ಪ್ರಶ್ನೆಗಳನ್ನು ಕೇಳಿ ಪಿಪ್ಪಲಾದವರಿಗೆ ಬಹಳ ಸಂತೋಷವಾಯಿತು ನೀನು ವೇದ ವಿಚಾರವಂತನು; ಸೂಕ್ಷ್ಮಬುದ್ಧಿಯವನು - ಎಂಬುದು ನಿನ್ನ ಪ್ರಶ್ನೆಗಳ ಪರ್ಯಾಲೋಚನೆಯಿಂದಲೇ ಗೊತ್ತಾಗುತ್ತದೆ. ಅವಶ್ಯಕವಾಗಿ ಕೇಳಬೇಕಾದ ವಿಷಯವನ್ನು ಕೇಳಿದ್ದೀಯೆ. ಅವುಗಳನ್ನು ಉತ್ತರಿಸುತ್ತೇನೆ ಕೇಳು ಎಂದು ಉತ್ತರ ಹೇಳಲು ಪ್ರಾರಂಭಿಸುತ್ತಾರೆ:-

ಈ ಮಹಾಮಹಿಮೋಪೇತನಾದ ಮುಖ್ಯಪ್ರಾಣನೂ ಕೂಡ ವಾಸುದೇವನಾದ ಪರಬ್ರಹ್ಮನಿಂದಲೇ ಉತ್ಪನ್ನ-ವಾಗುತ್ತಾನೆ. ಹೇಗೆ ಪುರುಷನ ನೆರಳು ಅವನ ಶರೀರವನ್ನೇ ಅವಲಂಬಿಸಿ, ಅದರ ಅಧೀನವಾಗಿರುತ್ತದೆಯೋ, ಹಾಗೆಯೇ ಪರಮಾತ್ಮನಲ್ಲಿ ಪ್ರಾಣಾದಿಗಳು (ಜೀವಜಡಾತ್ಮಕವಾದ ಸರ್ವವೂ) ಆಶ್ರಯ ಪಡೆದು, ಅವನ ಅಧೀನವಾಗಿರುತ್ತವೆ.

**ವಿಶೇಷ ವಿಷಯ:**

1) ಗುರುಣಾ ಶ್ಲಾಘಿತಾ ಶಿಷ್ಯಾಃ ಲೋಕೇ ಖ್ಯಾತಿಂ ಗಮಿಷ್ಯಂತಿ – ಎನ್ನುವಂತೆ ಪಿಪ್ಪಲಾದರು ಶಿಷ್ಯನಾದ ಕೌಸಲ್ಯರ ಸೂಕ್ಷ್ಮವಿಷಯಕ ಪ್ರಶ್ನೆಗಳನ್ನು ಕೇಳಿ ಸಂತೋಷದಿಂದ ಅವರನ್ನು ಪ್ರಶಂಸಿಸುತ್ತಾರೆ.

2) ಮುಖ್ಯಪ್ರಾಣನು ರುದ್ರಾದಿಗಳಿಗೂ ಉತ್ತಮನಾದರೂ ಪರಮಾತ್ಮನಿಂದ ಪ್ರಾಣನಿಗೆ ಜನ್ಮವು (ಉತ್ಪತ್ತಿಯು) ಎಂಬುದು ಯುಕ್ತವಾಗಿದೆ. ಆದ್ದರಿಂದಲೆ, ಬ್ರಹ್ಮಸೂತ್ರಕಾರರಾದ ಭಗವಾನ್ ಬಾದರಾಯಣರು ಓಂ ಜ್ಯೋತ ಏವ ಓಂ (ಬ್ರ.ಸೂ. 2-3-18) ಎಂದು ಸಾಮಾನ್ಯವಾಗಿ ಮುಖ್ಯಪ್ರಾಣನ ಮಹಿಮೆಯನ್ನು ಹೇಳಿ, ಓಂ ಶ್ರೇಷ್ಠಶ್ಚ ಓಂ (ಬ್ರ.ಸೂ. 2-4-9) ಎಂದು ಮತ್ತೆ ವಿಶೇಷತಃ ಇನ್ನೊಂದು ಸೂತ್ರವನ್ನು ಹೇಳಿದ್ದಾರೆ.

3) ಆತ್ಮ ಶಬ್ದಕ್ಕೆ ಅನೇಕಾರ್ಥಗಳಿರುವಾಗ, ಉಪನಿಷತ್ತಿನ ಆತ್ಮತಃ ಎಂಬ ಪದಕ್ಕೆ ಸರಿಯಾದ ಅಭಿಪ್ರಾಯವೇನೆಂದು ತಿಳಿಯಬೇಕು ಪ್ರಾಣನು ರುದ್ರಾದಿಗಳಿಗೂ ನಿಯಾಮಕನಾದುದರಿಂದ ಯಾವ ಜೀವರೂ ಅವನಿಗೆ ಜನ್ಮ ದಾತರಾಗಲು ಸಾಧ್ಯವಿಲ್ಲ, ಆತ್ಮ ಶಬ್ದವು ವಿಷ್ಣುವಿನಲ್ಲಿಯೇ ಪ್ರವೃತ್ತಿ ನಿಮಿತ್ತವನ್ನು ಹೊಂದಿದೆ. ''ಓಂ ದ್ಯುಭ್ವಾದ್ಯಾಯತನಂ ಸ್ವ ಶಬ್ದಾತ್ ಓಂ'' (ಬ್ರ.ಸೂ. 1-3-1) ಎಂಬ ಸೂತ್ರದಲ್ಲಿ ಸ್ವಶಬ್ದ (ಆತ್ಮಶಬ್ದವು) ಪರಮಾತ್ಮನನ್ನೇ ಹೇಳುತ್ತದೆಯೆಂದು ಸಿದ್ಧವಾಗಿದೆ. ಆದ್ದರಿಂದ ಇಲ್ಲಿಯ ಆತ್ಮ ಶಬ್ದಕ್ಕೆ ವಾಸುದೇವನೆಂದೇ ಅರ್ಥವು ॥ 2 ॥

**ಮನೋಕೃತೇನಾಯಾತ್ಯಸ್ಮಿಂಚ್ಛರೀರೇ । ಯಥಾ ಸಮ್ರಾಡೇವಾಧಿಕೃತಾನ್**
**ವಿನಿಯುಂಕ್ತೆ ಏತಾನ್ ಗ್ರಾಮಾನಧಿತಿಷ್ಠಸ್ವ ಏತಾನ್ ಗ್ರಾಮಾನಧಿತಿಷ್ಠಸ್ವ**
**ಇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್‌ಪೃಥಗೇವ**
**ಸನ್ನಿಧತ್ತೆ ॥ 3 ॥**

ದ್ವಿತೀಯಪ್ರಶ್ನೋತ್ತರಂ- ಮನಃ ಇತಿ । ಸಚಾಯಂ ಪ್ರಾಣೋ ಮನೋಕೃತೇನ ಮನಃಕೃತೇನ ಮನಃ ಪರಂಬ್ರಹ್ಮ ತತ್ಕೃತೇನ ತನ್ನಿಮಿತ್ತೇನ ತತ್ಪ್ರೇರಣಯಾ ಇತಿ ಯಾವತ್ । ಆತ್ಮನಃ ಪ್ರಕೃತಸ್ಯ ಮನೋನಿಮಿತ್ತೇನ ಇಚ್ಛಯ ಇತಿ ವಾ ಆಯಾತ್ಯಸ್ಮಿನ್ ಶರೀರ ಇತಿ । ಆತ್ಮಾನಂ ವಾ ಇತ್ಯಾದಿ ಪ್ರಶ್ನೋ-ತ್ತರಂ ಯಥಾ ಸಂಮ್ರಾಡಿತ್ಯಾದಿ । ಅಸ್ಯೇವಂ ಯೋಜನಾ । ಯತ್ಪೃಷ್ಟಂ ತ್ವಂ ಆತ್ಮಾನಂ ವಾ ಪ್ರವಿ-ಭಜ್ಯೇತಿ । ತತ್ರಾಸ್ತಿ ವಿವೇಕ್ತವ್ಯಮ್ । ದ್ವಿವಿಧಂ ತಾವತ್ ಪ್ರಾಣಾದಿ ಪಂಚಕಮ್ । ಏಕಂ ಮುಖ್ಯ-ಪ್ರಾಣಾಜ್ಜಾತಂ ತತೋऽತಿರಿಕ್ತಮ್ । ಅಪರಂ ತದಾತ್ಮಕಮಿತಿ । ತತ್ರ ಯಥಾ ಲೋಕೇ ಸಂಮ್ರಾಟ್ ಸಾರ್ವಭೌಮೋ ಅಧಿಕೃತಾನ್ ನಿಯೋಗಿನೋ ವಿನಿಯುಂಕ್ತೆ । ಕಥಂ ತ್ವಮೇತಾನ್ ಪಾಟಲೀ-ಪುತ್ರಾದೀನಧಿತಿಷ್ಠಸ್ವ - ತದಾಧಿಪತ್ಯೇನ ತಿಷ್ಠೇತ್ಯೇಕಮ್ । ಅನ್ಯಚ್ಚ ತ್ವಮೇತಾನ್ ಕೌಶಾಂಬೀ-

**ಪ್ರಭೃತೀನ್ ಗ್ರಾಮಾನಧಿತಿಷ್ಠಸ್ವ ಇತಿ । ಏವಮೇಷ ಮುಖ್ಯಪ್ರಾಣಃ ಇತರಾನ್ ಭಿನ್ನಾನ್ ಆತ್ಮನೋ ಜಾತತ್ವಾತ್ ಉಪಚಾರೇಣ ಆತ್ಮಪ್ರವಿಭಾಗಾನ್ ಪ್ರಾಣಾನ್ ವಾಯೂನ್ ಪೃಥಕ್‌ಪೃಥಗೇವ ಸ್ಥಾನೇಷು ಸನ್ನಿಧತ್ತೇ ಸಂಸ್ಥಾಪಯತಿ । ಸ್ವಯಂ ಚ ತತ್‌ಕ್ರಿಯಾಪ್ರವರ್ತಕತಯಾ ತತ್ರ ಪ್ರಾಣಾದಿ ಪಂಚರೂಪೋ ಅವತಿಷ್ಠತೆ ಇತ್ಯಾಶಯಃ ॥ 3 ॥**

**ಭಾವಾನುವಾದ :** ಪಿಪ್ಪಲಾದರು ಎರಡನೆಯ ಪ್ರಶ್ನೆಗೆ ಉತ್ತರ ಕೊಡುತ್ತಾರೆ:-

ಮುಖ್ಯಪ್ರಾಣನು ತನ್ನ ಇಚ್ಛೆಯಿಂದಲೂ ಪರಮಾತ್ಮನ ಪ್ರೇರಣಾನುಸಾರವಾಗಿಯೂ ಈ ಶರೀರದಲ್ಲಿ ಬರುತ್ತಾನೆ. ಮುಖ್ಯಪ್ರಾಣನ ಇಚ್ಛೆಯು ಪರಮಾತ್ಮನ ಇಚ್ಛೆಗೆ ಯಾವಾಗಲೂ ಅನುಗುಣವಾಗಿಯೇ ಇರುತ್ತದೆ; ಯಾವ ಸಂದರ್ಭ-ದಲ್ಲಿಯೂ ವಿರುದ್ಧ ಇಚ್ಛೆ ಇರುವುದಿಲ್ಲ. ಹಾಗೆ ಬಂದು ತನ್ನ ಅಧೀನವಾದ ಇತರ ಪ್ರಾಣಾದಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ (ಬೇರೆ ಬೇರೆಯಾಗಿ) ಶರೀರದಲ್ಲಿ ಸ್ಥಾಪಿಸುತ್ತಾನೆ. ಹೇಗೆಂದರೆ ಸಾರ್ವಭೌಮನಾದವನು ತನ್ನ ಅಧೀನರಾದ ರಾಜರು-ಗಳನ್ನು ನೀನು ಪಾಡಲೀಪುತ್ರ ರಾಜ್ಯವನ್ನು ಆಳು, ನೀನು ಕೌಶಂಬಿ ರಾಜ್ಯವನ್ನು ಆಳು ಎಂದು ಹೇಗೆ ನಿಯಂತ್ರಣ ಮಾಡುತ್ತಾನೆಯೋ ಹಾಗೆಯೇ

**ವಿಶೇಷ ವಿಷಯ :**

1) ಮನಃ ಎಂದರೆ ಪರಮಾತ್ಮನು. ಮನು ಅವಬೋಧನೆ ಎಂಬ ಧಾತು ಅನುಸಾರವಾಗಿ ಜ್ಞಾನಾತ್ಮಕನಾದ ಪರಬ್ರಹ್ಮನು ಎಂದರ್ಥವು.

2) ಆತ್ಮಾನಂ ವಾ ಪ್ರವಿಭಜ್ಯ'' (3-1) ಎಂದು ಕೇಳಿದ ಪ್ರಶ್ನೆಯ ಉತ್ತರವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಪ್ರಾಣಾದಿ ಪಂಚಕಗಳು (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಎರಡು ವಿಧ. ಒಂದು ಮುಖ್ಯಪ್ರಾಣನಿಂದಲೇ ಹುಟ್ಟಿದ ಪಂಚ ಪ್ರಾಣಗಳು, (ಮುಖ್ಯಪ್ರಾಣನ ಪುತ್ರರು-ಆದ್ದರಿಂದಲೇ ಅವನಿಂದ ಭಿನ್ನರಾದವರು): ಇನ್ನೊಂದು ಮುಖ್ಯ ಪ್ರಾಣನ ಸ್ವರೂಪಭೂತವಾದ ಪಂಚಪ್ರಾಣಗಳು. ಎರಡು ಗುಂಪುಗಳಿಗೂ ಅದೇ ಹೆಸರಗಳು, ಸಾರ್ವಭೌಮನು ತನ್ನ ಅಧಿ ಕಾರಿಗಳನ್ನು ಅಥವಾ ಸಾಮಂತರನ್ನು ಕೆಲವು ಸ್ಥಳಗಳಲ್ಲಿ ಸ್ಥಾಪಿಸಿ, ಅವರುಗಳು ಅಲ್ಲಿ ಅಧಿಕಾರ ನಡೆಸುವಂತೆ ಹೇಗೆ ಆಜ್ಞೆ ಮಾಡಿ ನಿಯಾಮಕನಾಗಿರುತ್ತಾನೆಯೋ ಹಾಗೆಯೇ ಮುಖ್ಯಪ್ರಾಣನು ತನ್ನಿಂದ ಭಿನ್ನರಾದ ಪ್ರಾಣಾದಿ ಪಂಚಕವನ್ನು ಶರೀರದ ನಾನಾ ಭಾಗದಲ್ಲಿ ಸ್ಥಾಪಿಸಿ, ತಾನು ಸ್ವತಃ ಪ್ರಾಣಾದಿ ರೂಪಗಳಿಂದ ಅವರಲ್ಲಿ ನಿಂತು ಆಯಾಯಾ ಕಾರ್ಯಗಳಿಗೆ ಪ್ರವರ್ತಕನಾಗುತ್ತಾನೆ.

3) ಯಥಾ ಸಮ್ರಾಟ್'' ಇತ್ಯಾದಿ ವಾಕ್ಯಗಳಿಂದ ಪ್ರಾಣಾದಿ ಪಂಚಕಗಳು ಮುಖ್ಯಪ್ರಾಣನಿಂದ ಭಿನ್ನವೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಮತ್ತೆ ಪುಣ್ಯೇನ ಪುಣ್ಯಲೋಕಂ ನಯ'' ಇತ್ಯಾದಿ ವಾಕ್ಯಗಳಿಂದ ಅದೇ ಪ್ರಾಣಾದಿ ಪಂಚಕಗಳು ಮೋಕ್ಷಪ್ರದವೆಂದು ಹೇಳಿದ್ದರಿಂದ, ಅವುಗಳು ಮುಖ್ಯಪ್ರಾಣನಿಂದ ಅಭಿನ್ನವೆಂದೂ ಹೇಳಿದ ಹಾಗಾಯಿತು. ಇವೆರಡು ವಾಕ್ಯಗಳಿಗೂ ಹೇಗೆ ವಿರೋಧವಿಲ್ಲವೆಂಬುದನ್ನು ಮೇಲೆ ಸ್ಪಷ್ಟಪಡಿಸಲಾಗಿದೆ. ಇದನ್ನು ಶ್ರೀ ಮಧ್ವಾಚಾರ್ಯರು ಪ್ರಭಂಜನ ಸ್ಮೃತಿ''ಯಿಂದ ವ್ಯಾಖ್ಯಾನ ಮಾಡಿದ್ದಾರೆ; ಸ್ವಕಪೋಲ ಕಲ್ಪಿತವಾದದ್ದಲ್ಲ 2 ಮತ್ತು 3ನೆಯ ಮಂತ್ರಗಳಿಗೆ ಸಾಮಾನ್ಯಸ್ಮೃತಿಯು ಹೀಗಿದೆ.

ವಿಷ್ಣೋರ್ವಾಯುಃ ಸಮುತ್ಪನ್ನೋ ವಾಯೋಃ ಸರ್ವಾಶ್ಚ ದೇವತಾಃ ।
ಪ್ರಾಣಾದ್ಯಾಸ್ತಾನ್ನಯನ್ ಪ್ರಾಣ ಆಜ್ಞಾಪಯತಿ ರಾಜವತ್ ।
ಸ್ವಯಂ ಚ ಪಂಚರೂಪಃ ಸನ್ ದದ್ಯಾನ್ಮೋಕ್ಷಾದಿಕಂ ಪ್ರಭುಃ ॥ ಇತಿ ಪ್ರಭಂಜನೇ ॥

ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟಿದನು. ಮುಖ್ಯಪ್ರಾಣನಿಂದ ಪ್ರಾಣಾದಿ ಇತರ ದೇವತೆಗಳು ಹುಟ್ಟಿದರು. ಮುಖ್ಯಪ್ರಾಣನು ತನಗಿಂತ ಭಿನ್ನರಾದ, ತನ್ನಿಂದಲೇ ಹುಟ್ಟಿದ ಪ್ರಾಣಾದಿಗಳನ್ನು ರಾಜನಂತೆ, ಅವರವರ ಕೆಲಸಗಳಲ್ಲಿ ಆಜ್ಞಾಪಿಸುತ್ತಾನೆ. ಸಮರ್ಥನಾದ ಆ ಮುಖ್ಯ ಪ್ರಾಣನೇ ತನಗಿಂತ ಭಿನ್ನರಾದ ಪ್ರಾಣಾದಿಗಳಲ್ಲಿ, ತಾನು ಪ್ರಾಣಾದಿ ಪಂಚರೂಪದಿಂದ ಇದ್ದು ಮೋಕ್ಷಾದಿ ಪುಣ್ಯಲೋಕಗಳನ್ನು ಭಗವಂತನ ಅನುಜ್ಞೆಯಿಂದ ಕೊಡುತ್ತಾನೆ ಎಂದು ಪ್ರಭಂಜನ ಎಂಬ ಗ್ರಂಥದಲ್ಲಿ ಹೇಳಿದೆ. ॥ 3 ॥

**ಪಾಯೂಪಸ್ಥೇಽಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೆ । ಮಧ್ಯೇ ತು ಸಮಾನಃ । ಏಷ ಹ್ಯೇತತ್ ಹುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ । ಹೃದಿ ಹ್ಯೇಷ ಆತ್ಮಾ ॥ 4 ॥**

**ಪೃತಕ್ಪೃಥಗಿತ್ಯುಕ್ತಂ ವಿವ್ರಿಯತೇ- ಪಾಯೂಪಸ್ಥ ಇತ್ಯಾದಿ । ಪಾಯುಶ್ಚೋಪಸ್ಥಶ್ಚ ಪಾಯೂ-ಪಸ್ಥಮ್ । ತತ್ರ ಮಲಾದೇರಪನಯನಾದಪಾನಂ ವಾಯುಮಾತ್ಮನೋ ರೂಪೇಣಾಪಾನೇನಾಧಿಷ್ಠಿತಂ ಸನ್ನಿಧತ್ತ ಇತಿ ಸಂಬಂಧಃ । ಚಕ್ಷುಶ್ಚ ಶ್ರೋತ್ರಂ ಚ ಚಕ್ಷುಃಶ್ರೋತ್ರಂ ತಸ್ಮಿನ್ಮುಖನಾಸಿಕಾಭ್ಯಾಂ ಸಹ ಮುಖೇ ನಾಸಿಕಾಯಾಂ ಚೇತಿ ಯಾವತ್ । ಪ್ರಾಣಃ ಸ್ವಯಂ ಮುಖ್ಯ ಏವ ಶ್ವಾಸಾದಿಪ್ರಣಯನಾತ್ ಪ್ರಾಣನಾಮ್ನಾ ಸ್ವರೂಪೇಣ ವಾಯುಮಧಿಷ್ಠಾಯ ಪ್ರತಿಷ್ಠತೇ ಪ್ರತಿತಿಷ್ಠತಿ । ಸಮಾನಸ್ತು ಸಮಾನವಾಯುಮಧಿಷ್ಠಾಯ ಮಧ್ಯೇ ಪ್ರಾಣಾಪಾನಯೋರ್ನಾಭಿದೇಶ ಇತಿ ಯಾವತ್ । ಪ್ರತಿತಿಷ್ಠತಿ । ಸ ಏಷ ಯಸ್ಮಾದೇತದ್ಧುತಂ ಭುಕ್ತಂ ಅನ್ನಂ ಸಮಂ ಯಥಾ ಶರೀರಾವಯವಂ ನಯತಿ ತೇನ ಸಮಾನ ಇತಿ ಶೇಷಃ । ಕಿಂ ತೇನ ? ತಸ್ಮಾದನ್ನಸ್ಯ ಸಮೀಕರಣಾದ್ಧೇತೋಃ ಸಪ್ತಾರ್ಚಿಷಃ ಸಪ್ತಜ್ಞಾನೇಂದ್ರಿಯವೃತ್ತಯೋ ಭವಂತಿ । ನನ್ವಾತ್ಮೈವ ವಿಷಯಸಂಸರ್ಗೇಣ ತಾನನುಭವಿಷ್ಯತಿ ಕಿಮಿಂದ್ರಿಯವೃತ್ತಿಭೀರಿತಿ । ಮೈವಮ್ । ಹೃದಿ ಹ್ಯೇಷ ಆತ್ಮಾ ಜೀವಃ ಸ್ವರೂಪೇಣ ವರ್ತತೇ । ಅತಃ ಕಥಂ ತಸ್ಯಾಣೋಃ ವಿಷಯಸಂಗತಿಃ ಸ್ಯಾದಿತಿ ॥ 4 ॥**

ಪೃಥಕ್ ಪೃಥಗೇವ ಸನ್ನಿಧತ್ತೆ'' (3-3) ಎಂದು ಹೇಳಿದುದನ್ನು ವಿವರಿಸುತ್ತಾರೆ :- ಪಾಯು, ಉಪಸ್ಥ ಇವುಗಳಲ್ಲಿ ಮಲಾದಿಗಳನ್ನು ಹೊರೆಹಾಕುವ ಅಪಾನ ನಾಮಕ ವಾಯುವನ್ನು, ತನ್ನದೇ ಆದ ಅಪಾನ ರೂಪ ಅಪಾನ ನಾಮದಿಂದ ಮುಖ್ಯಪ್ರಾಣನು ಅಧಿಷ್ಠಿತನಾಗುತ್ತಾನೆ; ಹಾಗೆಯೇ ಕಣ್ಣು, ಕಿವಿ, ಬಾಯಿ, ಮೂಗು, ಇವುಗಳಲ್ಲಿ ಶ್ವಾಸಾದಿಗಳನ್ನು ನಡೆಸುವ ಪ್ರಾಣ ವಾಯುವನ್ನು ಅಧಿಷ್ಠಾನ ಮಾಡಿಕೊಂಡು ಪ್ರಾಣ ರೂಪದಿಂದ ಪ್ರತಿಷ್ಠಿತನಾಗಿದ್ದಾನೆ. ಇವನು ಭುಕ್ತನಾದ ಅನ್ನವನ್ನು ಶರೀರಾವಯಗಳಿಗೆ ಸಮಾನವಾಗಿ ಹಂಚುತ್ತಾನೆ. ಆದ್ದರಿಂದಲೇ ಇವರಿಗೆ ಸಮಾನ'' ಎಂದು ಹೆಸರು ಇದರಿಂದ ಸಪ್ತ-

ಜ್ಞಾನೇಂದ್ರಿಯಗಳ ವೃತ್ತಿಗಳುಂಟಾಗುತ್ತವೆ ಇಂದ್ರಿಯಗಳು ಪ್ರಜ್ವಲಿಸುತ್ತವೆ ಎಂದರ್ಥ ರೂಪ, ಶಬ್ದಾದಿ ಜ್ಞಾನಗಳನ್ನು ಹುಟ್ಟಿಸುತ್ತವೆ. (ಸಪ್ತ ಜ್ಞಾನೇಂದ್ರಿಯಗಳು ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಮನಸ್ಸು, ಬುದ್ಧಿ)

ಆತ್ಮನೇ (ಜೀವನೇ) ವಿಷಯ ಸಂಸರ್ಗದಿಂದ ರೂಪಾದಿ ಜ್ಞಾನಗಳನ್ನು ಅನುಭವಿಸುತ್ತಾನೆ - ಇಂದ್ರಿಯ ವೃತ್ತಿಗಳ ಅವಶ್ಯಕತೆಯೇನು? - ಎಂದರೆ ಹೃದಿಹ್ಯೇಷ ಆತ್ಮಾ - ಈ ಜೀವನು ಸ್ವರೂಪತಃ ಹೃದಯ ಪ್ರದೇಶದಲ್ಲಿರುತ್ತಾನೆ ಮತ್ತು ಅಣುರೂಪನು ಆಗಿದ್ದಾನೆ ಹೀಗಿರುವಾಗ ಅವನಿಗೆ ವಿಷಯ ಸಂಬಂಧಗಳು ಸಾಕ್ಷಾತ್ತಾಗಿ ಆಗುವ ಸಂಭವವಿಲ್ಲ ಆದ್ದರಿಂದ ಜ್ಞಾನೇಂದ್ರಿಯ ಪ್ರವೃತ್ತಿಯು ಅವಶ್ಯಕವಾಗಿದೆ ॥ 4 ॥

**ಅತ್ರೈತದೇಕಶತಂ ನಾಡೀನಾಮ್ । ತಾಸಾಂ ಶತಮೇಕೈಕಸ್ಯಾಂ ದ್ವಾಸ-ಪ್ತತಿಂ ಪ್ರತಿಶಾಖಾನಾಡೀಸಹಸ್ರಾಣಿ ಭವತ್ಯಾಸು ವ್ಯಾನಶ್ಚರತ್ಯಥೈಕ-ಯೋರ್ಧ್ವಂ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಮ್ ॥ 5 ॥**

**ವ್ಯಾನಸ್ಯ ಪ್ರವೃತ್ತಿಂ ವಕ್ತುಮುಚ್ಯತೇ- ಅತ್ರೇತ್ಯಾದಿ । ಅತ್ರ ಶರೀರೇ ಏತದೇಕಶತಂ ಏಕೋತ್ತರಶತಂ ನಾಡೀನಾಂ ಶಿರಾಣಾಂ ಭವತಿ । ತಾಸಾಂ ನಾಡೀನಾಂ ಮಧ್ಯೇ ಏಕೈಕಸ್ಯಾಂ ನಾಡ್ಯಾಂ ಶತಂ ಶತಂ ಪ್ರತಿಶಾಖಾನಾಡ್ಯೋ ಭವಂತಿ । ಪುನಸ್ತಾಸಾಂ ಪ್ರತಿಶಾಖಾನಾಡ್ಯೋ ಭವಂತೀತಿ ವಕ್ತವ್ಯಮ್ । ಏವಂ ಚ ಸಂಭೂಯ ಪ್ರತಿಶರೀರಂ ತಾಸಾಂ ಪ್ರತಿಶಾಖಾನಾಡೀನಾಂ ಸಹಸ್ರಾಣಿ ದ್ವಾಸಪ್ತತಿಂ ಜಾನೀಯಾತ್ । ಪ್ರತಿಶಾಖಾನಾಡೀಸಹಸ್ರಾಣಾಂ ದ್ವಾಸಪ್ತತಿಮಿತಿ ದ್ವಿತೀಯಾ ಷಷ್ಠ್ಯರ್ಥೇ ಯೋಜನೀಯಾ । ಕಿಂ ಚಾತಃ ಆಸು ನಾಡೀಷು ವಿವಿಧಂ ನಯನಾತ್ ವ್ಯಾನೋ ವ್ಯಾನವಾಯುಮಧಿಷ್ಠಾಯ ಚರತಿ । ಅಥೋದಾನಸ್ತು ಉದಾನವಾಯುಮಧಿಷ್ಠಾಯ ಏಕಯಾ ನಾಡ್ಯಾ ಸುಷುಮ್ನಯೋರ್ಧ್ವಗತಿಶ್ಚರತಿ । ಸ ಚ ತತ್ರ ಚರನ್ ಪುಣ್ಯೇನ ಜೀವಕೃತಂ ಪುಣ್ಯಂ ನಿಮಿತ್ತೀಕೃತ್ಯ ಪುಣ್ಯಂ ಸ್ವರ್ಗಾದಿಲೋಕಂ ನಯತಿ । ಏವಂ ಜ್ಞಾನೇನ ಮೋಕ್ಷಮಿತಿ ಚ ದ್ರಷ್ಟವ್ಯಮ್ । ಅತ ಏವೋರ್ಧ್ವನಯನಾದುದಾನಃ ಪಾಪೇನ ಪಾಪಂ ನರಕಾದಿಕಂ ದುಃಖಬಹುಲಂ ಲೋಕಂ ನಯತಿ । ಉಭಾಭ್ಯಾಂ ಸಮಪ್ರಧಾನಾಭ್ಯಾಂ ಪುಣ್ಯಪಾಪಾಭ್ಯಾಂ ಸಮ-ದುಃಖಸುಖಂ ಮನುಷ್ಯಲೋಕಂ ನಯತೀತಿ ॥ 5 ॥**

ಭಾವಾನುವಾದ ಮತ್ತು ವಿಶೇಷ ವಿಷಯ : ಈ ಶರೀರದಲ್ಲಿ ಪ್ರಧಾನ ನಾಡಿಗಳು ಒಂದು ನೂರ ಒಂದು ಇವೆ. ಅವುಗಳಲ್ಲಿ ಒಂದೊಂದೂ 100 ನಾಡಿಗಳನ್ನು ಉಪಶಾಖೆಗಳನ್ನಾಗಿ ಹೊಂದಿವೆ. ಇವುಗಳಲ್ಲಿ 10000 ನಾಡಿಗಳು ಒಂದೊಂದು 7 ಪ್ರತಿ ನಾಡಿಗಳನ್ನು ಹೊಂದಿವೆ. ಉಳಿದ 100 ನಾಡಿಗಳು ಒಂದೊಂದು 20 ಪ್ರತಿನಾಡಿಗಳನ್ನು ಹೊಂದಿವೆ. ಹೀಗೆ 72000 ನಾಡಿಗಳು. $(100 \times 100 \times 7) + (1 \times 100 \times 20) = 72000$. ಇವುಗಳಲ್ಲಿ ಸುಷುಮ್ನಾ ನಾಡಿಯಲ್ಲಿ ಸ್ಥಿತನಾದ ಉದಾನವಾಯುವನ್ನು ಅಧಿಷ್ಠಾನ ಮಾಡಿಕೊಂಡು, ಉದಾನ ನಾಮಕ ಮುಖ್ಯ ಪ್ರಾಣನು ಊರ್ಧ್ವಗಾಮಿಯಾಗಿ ಸಂಚರಿಸುತ್ತಾನೆ. ಅಲ್ಲದೆ, ಉದಾನನು ಜೀವನು ಮಾಡಿದ ಪುಣ್ಯಕಾರ್ಯವನ್ನು ನಿಮಿತ್ತ

ಮಾಡಿಕೊಂಡು ಅವನನ್ನು ಸ್ವರ್ಗಾದಿಲೋಕಕ್ಕೂ, (ಈ ಜ್ಞಾನದಿಂದ ಮೋಕ್ಷಲೋಕಕ್ಕೂ ಎಂದು ತಿಳಿಯಬೇಕು) ಪಾಪಕಾರ್ಯವನ್ನು ನಿಮಿತ್ತ ಮಾಡಿಕೊಂಡು ನರಕಾದಿ ಬಹುದುಃಖ ರೂಪವಾದ ಲೋಕಗಳಿಗೂ, ಪುಣ್ಯಪಾಪಗಳು ಸಮವಾಗಿದ್ದರೆ ಸುಖದುಃಖ ಮಿಶ್ರವಾಗಿರುವ ಮನುಷ್ಯಲೋಕಕ್ಕೂ ಜೀವನನ್ನು ಕೊಂಡೊಯ್ಯುತ್ತಾನೆ.

1) ವಿವಿಧಂ ನಯನಾತ್ ವ್ಯಾನಃ ।

2) ಊರ್ಧ್ವಂ ನಯನಾತ್ ಉದಾನಃ ।

3) ಹುತಂ (ಭುಕ್ತಂ) ಅನ್ನಂ ಸಮಂ ಯಥಾ ಶರೀರಾವಯವಂ ನಯತಿ ತೇನ ಸಮಾನಃ ।

4) ಮಲಾದೇರಪನಯನಾತ್ ಅಪಾನಃ ।

5) ಶ್ವಾಸಾದಿ ಪ್ರಣಯನಾತ್ ಪ್ರಾಣಃ ।

**ಆದಿತ್ಯೋ ಹ ವೈ ಬಾಹ್ಯಃ ಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ । ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷ-ಸ್ಯಾಪಾನಮವಷ್ಟಭ್ಯಾಂತರಾ ಯದಾಕಾಶಃ ಸ ಸಮಾನೋ ವಾಯು-ರ್ವ್ಯಾನಸ್ತೇಜೋ ಹ ವಾ ಉದಾನಃ । ತಸ್ಮಾದುಪಶಾಂತತೇಜಾಃ ಪುನ-ರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ ॥ 6 ॥**

ಸಂಪದ್ಯಮಾನೈಃ = ಲೀನವಾಗುವ ಇಂದ್ರಿಯೈಃ (ಸಹ) = ಇಂದ್ರಿಯ ಸಹಿತವಾಗಿ, ಪುನರ್ಭವಂ = ಜನ್ಮಾಂತರವನ್ನು (ಎಂದರೆ ಈಗ ಅವನು ಮರಣವನ್ನು ಹೊಂದುತ್ತಾನೆಂದು ಜನರು ಅನುಮೇಯಿಸುತ್ತಾರೆ).

**ಕಥಂ ಬಾಹ್ಯಮಿತ್ಯಾದಿ ಪ್ರಶ್ನದ್ವಯಂ ಪರಿಹ್ರಿಯತೇ- ಆದಿತ್ಯ ಇತ್ಯಾದಿ । ಮುಖ್ಯಪ್ರಾಣ ಏವ ಹಿ ಪ್ರಾಣನಾಮಾ ಬಾಹ್ಯೋ ಬಹಿರ್ಭವಃ ಆದಿತ್ಯೇ ಸ್ಥಿತಃ ತನ್ನಾಮಾ ಉದಯತೇ ಉದ್ಗಚ್ಛತಿ । ಏಷ ಆದಿತ್ಯಸ್ಥಃ ಪ್ರಾಣ ಏವೈನಂ ಚಾಕ್ಷುಷಂ ಚಕ್ಷುಷಿ ಭವಂ ಪ್ರಾಣವಾಯುಂ ಅನುಗೃಹ್ಣಾನಃ ವರ್ತತೇ । ಏತೇನ ಮುಖ್ಯಪ್ರಾಣಃ ಪ್ರಾಣನಾಮ್ನಾ ರೂಪೇಣ ಬಹಿರಾದಿತ್ಯಮಭಿಧತ್ತೇ । ಅಧ್ಯಾತ್ಮಂ ಚಾಧಿಷ್ಠಾನಭೂತೇನ ಆದಿತ್ಯೇನ ಸಹೈವ ಚಕ್ಷುಷಿ ಸ್ಥಿತ್ವಾ ಚಕ್ಷುಸ್ತದಭಿಮಾನಿನಂ ಚ ಪ್ರಾಣವಾಯುಮಭಿಧತ್ತ ಇತ್ಯುಕ್ತಂ ಭವತಿ । ಏವಂ ಉತ್ತರತ್ರಾಪಿ ಜ್ಞಾತವ್ಯಮ್ । ಬಹಿಃ ಪೃಥಿವ್ಯಾಂ ಯಾ ಧಾರಿಕಾ ಅಪಾನಾಖ್ಯದೇವತಾ ಸೈಷಾ ಪುರುಷಸ್ಯಾಪಾನಂ ದೇಹೇ ವರ್ತಮಾನಮಪಾನವಾಯುಮವಷ್ಟಭ್ಯ ಧೃತ್ವಾ ಅಂತರಾ ಶರೀರಾಂತ-ರ್ವರ್ತತೇ । ಅಂತರಾ ದ್ಯಾವಾಪೃಥಿವ್ಯೋರ್ಮಧ್ಯೇ ಯಥಾಕಾಶೋ ಯಃ ಆಕಾಶಃ ಆಕಾಶಧಾರಕಃ ಸಮಾನಃ । ಸೋಽಧ್ಯಾತ್ಮಂ ಸಮಾನಃ ಸಮಾನವಾಯುಂ ಧತ್ತೇ । ಯೋ ಬಹಿರ್ವಾಯುಧಾರಕೋ ವ್ಯಾನಃ ಸ ಏವಾಂತರ್ವ್ಯಾನೋ ವ್ಯಾನವಾಯುಧಾರಕಃ । ಬಹಿಸ್ತೇಜೋಧಾರಕೋ ಯ ಉದಾನಃ ಸ ಉದಾನೋ ಉದಾನವಾಯುಂ ಧತ್ತ ಇತ್ಯೇತತ್ಪ್ರಸಿದ್ಧಮ್ । ಕಥಮಿತಿ ಯಸ್ಮಾತ್ತೇಜೋಽಧಿಷ್ಠಾತಾ**

**ಉದಾನಃ ತೇನಾಧಿಷ್ಠಾನೇನ ತೇಜಸಾ ಸಹೈವಾಂತಃ ಉದಾನಂ ದಧತ್ ಪ್ರಾಣಿನಾಂ ಜೀವನಹೇತು-ರ್ವರ್ತತೇ । ತಸ್ಮಾದೇವ ಹಿ ಯಃ ಪುರುಷಃ ಉಪಶಾಂತತೇಜಾ ಭವತಿ । ಸ ತೇಜಸೋಪಶಮೇನ ಉದಾನಸ್ಯಾಪಿ ಆಗಮನಮನುಮಾಯ ಮನಸಿ ಸಂಪದ್ಯಮಾನೈರ್ಲೀಯಮಾನೈರಿಂದ್ರಿಯೈಃ ಸಹ ಪುನರ್ಭವಂ ಜನ್ಮಾಂತರಂ ಮರಣಮಿತಿ ಯಾವತ್ । ಪ್ರಾಪ್ಸ್ಯತೀತಿ ಅನುಮೀಯತೇ ಲೋಕ ಇತಿ ಯೋಜ್ಯಮ್ ॥ 6 ॥**

**ಭಾವಾನುವಾದ :** ಕಥಂ ಬಾಹ್ಯಂ'' – ಎಂದು ಕೇಳಿದ ಎರಡು ಪ್ರಶ್ನೆಗಳಿಗೆ ಉತ್ತರ ಹೇಳುತ್ತಾರೆ ಮುಖ್ಯಪ್ರಾಣನೇ ಬಾಹ್ಯದಲ್ಲಿರುವ ಆದಿತ್ಯನನ್ನು (ಆದಿಭೂತ) ಪ್ರಾಣನಾಮಕನಾಗಿ ಧಾರಣೆ ಮಾಡಿದ್ದಾನೆ; ಆದಿತ್ಯ ಸ್ಥಿತನಾದ ಆದಿತ್ಯ ನಾಮಕ ದೇವತೆಯನ್ನು (ಆದಿದೈವ) ಅಧಿಷ್ಠಾನ ಮಾಡಿಕೊಂಡ. ಅವನ ಸಹಿತನಾಗಿ ಚಕ್ಷುಸ್ಸಿನಲ್ಲಿದ್ದು (ಆಧ್ಯಾತ್ಮ) ಚಕ್ಷುಸ್ಸನ್ನೂ, ತದಭಿಮಾನಿಯನ್ನೂ ಪ್ರಾಣವಾಯುವನ್ನೂ ಧಾರಣೆ ಮಾಡಿದ್ದಾನೆ.

ಮುಖ್ಯಪ್ರಾಣನೇ ಬಾಹ್ಯವಾದ ಪೃಥಿವಿಯನ್ನು (ಆದಿಭೂತ) ಧಾರಣೆ ಮಾಡಿರುವ ಅಪಾನಾಖ್ಯನು. ಪೃಥಿವೀಸ್ಥಿತ ಪ್ರಥವೀನಾಮಕ ದೇವತೆಯನ್ನೂ (ಆಧಿದೈವ), ಅಧಿಷ್ಠಾನ ಮಾಡಿಕೊಂಡು, ಆ ದೇವತೆ ಸಹಿತವಾಗಿ ಪುರುಷನ ದೇಹದಲ್ಲಿಯ ಪಾಯು, ಉಪಸ್ಥಗಳನ್ನೂ (ಆಧ್ಯಾತ್ಮ) ತದಭಿಮಾನಿಯನ್ನೂ ಅಪಾನವಾಯುವನ್ನು ಧಾರಣೆ ಮಾಡಿದ್ದಾನೆ.

ಮುಖ್ಯಪ್ರಾಣನೇ ಬಾಹ್ಯಾಕಾಶ (ಆದಿಭೂತ)ವನ್ನು ಧಾರಣೆ ಮಾಡಿಕೊಂಡಿರುವ ಸಮಾನಾಖ್ಯನು. ಅವನೇ ಆಕಾಶಾಭಿಮಾನಿ ದೇವತೆಯನ್ನು (ಆಧಿದೈವ), ಅಧಿಷ್ಠಾನ ಮಾಡಿಕೊಂಡು, ಆ ದೇವತೆ ಸಹಿತವಾಗಿ ಪುರುಷನ ದೇಹದಲ್ಲಿಯ ನಾಭಿ ಪ್ರದೇಶದಲ್ಲಿದ್ದು (ಆಧ್ಯಾತ್ಮ) ಆಕಾಶ, ತದಭಿಮಾನಿ ಸಮಾನವಾಯುವನ್ನು ಧಾರಣೆ ಮಾಡಿದ್ದಾನೆ.

ಮುಖ್ಯಪ್ರಾಣನೇ ಭೂತವಾಯು (ಆಧಿಭೂತ)ವನ್ನು ಧಾರಣೆಮಾಡಿಕೊಂಡಿರುವ ವ್ಯಾನ ನಾಮಕನು. ಅವನೇ ಭೂತವಾಯು ಅಭಿಮಾನಿಯನ್ನು (ಆಧಿದೈವ) ಅಧಿಷ್ಠಾನ ಮಾಡಿಕೊಂಡು, ಆ ದೇವತೆ ಸಹಿತವಾಗಿ ಪುರುಷನ ದೇಹ-ದಲ್ಲಿಯ ನಾಡಿಗಳಲ್ಲಿರುವ ವಾಯುವಿನಲ್ಲಿದ್ದು (ಆಧ್ಯಾತ್ಮ) ಆ ವಾಯುವನ್ನೂ, ತದಭಿಮಾನಿಯನ್ನೂ, ವ್ಯಾನವಾಯು-ವನ್ನೂ, ಧಾರಣೆ ಮಾಡಿದ್ದಾನೆ.

ಮುಖ್ಯಪ್ರಾಣನೇ ತೇಜಸ್ಸನ್ನು (ಆದಿಭೂತ) ಧಾರಣೆಮಾಡಿಕೊಂಡಿರುವ ಉದಾನಾಖ್ಯನು. ಅವನೇ ತೇಜೋಭಿ-ಮಾನಿ ದೇವತೆಯನ್ನು (ಅಧಿದೈವ) ಅಧಿಷ್ಠಾನ ಮಾಡಿಕೊಂಡು, ಆ ದೇವತೆ ಸಹಿತವಾಗಿ ಪುರುಷನ ದೇಹದಲ್ಲಿಯ ಸುಷುಮ್ನಾ ನಾಡಿಯಲ್ಲಿರುವ ತೇಜಸ್ಸಿನಲ್ಲಿದ್ದು (ಆಧ್ಯಾತ್ಮ) ಆ ತೇಜಸ್ಸನ್ನು ತದಭಿಮಾನಿಯನ್ನೂ, ಉದಾನವಾಯುವನ್ನೂ ಧಾರಣೆ ಮಾಡಿದ್ದಾನೆ.

ಹೀಗೆ ಉದಾನ ನಾಮಕನಾದ ಮುಖ್ಯಪ್ರಾಣನು ದೇಹದಲ್ಲಿರುವ ತೇಜಸ್ಸನ್ನೂ (ಶಾಖವನ್ನು) ಮತ್ತು ಉದಾನ ವಾಯುವನ್ನು ಅನುಗ್ರಹ ಮಾಡುತ್ತಿರುವುದರಿಂದ ಪ್ರಾಣಿಗಳು ಬದುಕಿರುವುದಕ್ಕೆ ಸಾಧ್ಯವಾಗಿದೆ. ಇಲ್ಲವಾದರೆ ಮರಣವೇ ಸರಿ. ಕ್ಷೀಣತೇಜಸ್ಕನಾದರೆ ಇವರ ಇಂದ್ರಿಯಾಭಿಮಾನಿ ದೇವತೆಗಳು ಉದಾನ ನಾಮಕನು ಬಿಟ್ಟುಹೋಗುತ್ತಾನೆಂದು ಊಹಿಸಿ, ಎಲ್ಲರೂ ಮನಸ್ಸಿನಲ್ಲಿ ಲೀನವಾಗುತ್ತಾರೆ. ಆಗ ಪುರುಷನು ಮೃತನಾಗುತ್ತಾನೆಂದು ಜನರು ತಿಳಿಯುತ್ತಾರೆ. ಪ್ರಾಣ ಉತ್ಕ್ರಮಣಕಾಲದಲ್ಲಿ ವಾಗಾದಿ ಇಂದ್ರಿಯಗಳು ಮನಸ್ಸೇಂದ್ರಿಯದಲ್ಲಿ ಲೀನವಾಗುತ್ತವೆ. (ಭಾಂ 6-3-5) ಇದು ಪ್ರಸಿದ್ಧವು ॥ 6 ॥

ಯಚ್ಚಿತ್ತಃ ತೇನ ಏಷ ಪ್ರಾಣಮಾಯಾತಿ । ಪ್ರಾಣಃ ತೇಜಸಾ ಯುಕ್ತಃ ಸಹಾತ್ಮನಾ ಯಥಾ ಸಂಕಲ್ಪಿತಂ ಲೋಕಂ ನಯತಿ । ಯ ಏವಂ ವಿದ್ವಾನ್ ಪ್ರಾಣಂ ವೇದ ನ ಹಾಸ್ಯ ಪ್ರಜಾ ಹೀಯತೆ ಅಮೃತೋ ಭವತಿ । ತದೇಷ ಶ್ಲೋಕಃ । ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ । ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಮೃತಮಶ್ನುತೇ ವಿಜ್ಞಾಯಾಮೃತಮಶ್ನುತ ಇತಿ ॥ 7 ॥

// ಇತಿ ತೃತೀಯಪ್ರಶ್ನಃ //

**ಅವತಾರಿಕಾ :** ಅಶ್ವಲಾಯನನು ಗುರುಗಳಾದ ಪಿಪ್ಪಲಾದರನ್ನು ಕುರಿತು 5 ಪ್ರಶ್ನೆ ಮಾಡಿದ್ದನು. ಅವುಗಳ ಪೈಕಿ 3 ಪ್ರಶ್ನೆಗಳಿಗೆ ಉತ್ತರವನ್ನೂ ತಿಳಿಸಿದರು. ಈಗ 4 ಮತ್ತು 5ನೇ ಪ್ರಶ್ನೆಗಳಾದ ಕೇನ ಉತ್ಕ್ರಮತೆ ಹಾಗೂ ಕಥಂ ಬಾಹ್ಯಮಭಿದತ್ತೆ ಎಂಬುದಕ್ಕೆ ಹಿಂದೆಯೇ ಉಕ್ತವಾಗಿದೆ. ತೇಜೋನಿಯಾಮಕನಾದ ಉದಾನನಿಗೆ ಜೀವರುಗಳ ಉತ್ಪತ್ತಿಗೆ ಕಾರಣಗಳನ್ನೂ ಹೇಳಿದರು. ಆದರೆ ಆ ವಿಷಯವನ್ನೂ ಧಾರ್ಢ್ಯಾರ್ಥವಾಗಿ ಮತ್ತು ಸಮರ್ಥಿಸಲು ಮನುಷ್ಯನು ತನ್ನ ಮರಣ ಕಾಲದಲ್ಲಿ ಉದಾನಾಧೀನನಾಗುವುದು ಎಂಬುದನ್ನೂ ಅಂದರೆ ಜೀವನು ದೇಹಾದಿಗಳಲ್ಲಿ ಬರುವಿಕೆ ಮತ್ತು ದೇಹದಿಂದ ಹೊರಡುವಿಕೆಯು ಉದಾನರೂಪನಾದ ಮುಖ್ಯಪ್ರಾಣನ ದೆಶೆಯಿಂದಲೇ ಆಗುವುದೆಂದು ಹೇಳಿ ಆಯಿತು. ಈಗ ಪ್ರಶ್ನೆಯು ಅದರಲ್ಲಿ ಅಂತರ್ಗತವಾಗಿ ಅದಕ್ಕೆ ಸಂಬಂಧಿಸಿರುವುದೆಂದು ಪಿಪ್ಪಲಾದರು ಉತ್ತರಿಸುತ್ತಾರೆ. ಹೀಗೆ ತಿಳಿದ ಜ್ಞಾನಿಗೆ ಲಭಿಸುವ ಫಲವನ್ನೂ ತಿಳಿಸುತ್ತಾರೆ.

ಸಂಗತಿವಿಶೇಷಲಾಭಾತ್ಕೇನೋತ್ಕ್ರಮತ ಇತಿ ಪ್ರಶ್ನಸ್ಯೋತ್ತರಮಿದಾನೀಂ ಉಚ್ಯತೆ- ಯಚ್ಚಿತ್ತ ಇತಿ । ಏಷ ಪುರುಷೋ ಯಚ್ಚಿತ್ತೋ ಮರಣಕಾಲೇ ಯದ್ವಿಷಯಚಿತ್ತೋ ಭವತಿ । ತೇನ ತದ್ವಿಷಯಚಿತ್ತೇನ ಸಹ ಪ್ರಾಣಂ ಮುಖ್ಯಮಾಯಾತಿ ತತ್ಸಮೀಪಂ ಪ್ರಾಪ್ನೋತಿ ಪ್ರಾಣಸ್ತು ತೇಜಸೋದಾನೇನ ಯುಕ್ತಃ ಪರಮಾತ್ಮನಾ ಸಹ ಜೀವೇನ ಯಥಾ ಸಂಕಲ್ಪಿತಂ ತೇನ ಜೀವೇನ ಮರಣಕಾಲೇ ಯಾದೃಶಃ । ಸಂಕಲ್ಪಿತಃ ಸ್ಮೃತಃ ತಥಾವಿಧಂ ಲೋಕಂ ಶರೀರಂ ನಯತಿ ಪ್ರಾಪಯತೀತಿ । ಅತ ಏವ ಯಚ್ಚಿತ್ತ, ಇತ್ಯುಕ್ತಮ್ । ಸ್ವಾಭಿಪ್ರೇತಮಿತಿ ವಾ । ಅನೇನೋದಾನರೂಪೇಣೋತ್ಕ್ರಮಣಮಿತ್ಯುಕ್ತಂ ಭವತಿ । ಏವಂಭೂತಪ್ರಾಣ-ವಿಜ್ಞಾನಸ್ಯ ಫಲಮುಚ್ಯತೇ- ಯ ಏವಮಿತಿ । ಯೋ ವಿದ್ವಾನೇವಮುಕ್ತಲಕ್ಷಣಂ ಪ್ರಾಣಂ ವೇದ ವಿಜಾನಾತಿ ನಾಸ್ಯ ವಿದುಷಃ ಪ್ರಜಾ ವಿಹೀಯತೇ । ಅವಿಚ್ಛಿನ್ನಸಂತಾನೋ ಭವತೀತ್ಯೈಹಿಕಮ್ । ಪರತ್ರ ಚಾಮೃತೋ ಮುಕ್ತೋ ಭವತಿ ತದೇಷ ಶ್ಲೋಕಃ ಪ್ರಾಣಸ್ಯೋತ್ಪತ್ತಿಂ ಪರಮಾತ್ಮನಾ ಆಯತಿಂ ಪ್ರವರ್ತನಂ ಶರೀರೇ ತದಿಚ್ಛಯಾ ಸ್ಥಾನಂ ಪಾಯೂಪಸ್ಥಾದಿ ಪಂಚಧಾ ಪ್ರಾಣಾದಿರೂಪೇಣ ವಿಭುತ್ವಂ ವಿವಿಧಭವನಂ ಸ್ವಾಮ್ಯಂ ಚ । ತಥಾಧ್ಯಾತ್ಮಂ ಧಾರಕತ್ವಂ ಚಶಬ್ದೇನ ಬಾಹ್ಯಧಾರಕತ್ವಮುತ್ಕ್ರಮಣಂ ಚೇತ್ಯೆತದ್ವಿಜ್ಞಾಯ ವಿಶೇಷೇಣ ಜ್ಞಾತ್ವಾಽಮೃತಂ ಮೋಕ್ಷಮಶ್ನುತೇ ಪ್ರಾಪ್ನೋತಿ ॥ 7 ॥

**ಭಾವಾನುವಾದ :** ಮರಣಕಾಲದಲ್ಲಿ ಜೀವನು ಯಾವ ವಿಷಯವನ್ನು ಚಿಂತಿಸುತ್ತಿರುತ್ತಾನೆಯೋ ಅವನ್ನು ಕೂಡಿಕೊಂಡು ಆ ಮನಸ್ಸಿನ ಸಹಿತವಾಗಿಯೇ ತೇಜನಸಾಧಿಷ್ಠಾತನಾದ ಉದಾನನಾಮಕ ಮುಖ್ಯಪ್ರಾಣನು ಉದಾನ ವಾಯು ಮತ್ತು ಪರಮಾತ್ಮನಿಂದ ಸಹಿತನಾಗಿ ಆ ಶರೀರವನ್ನು ಬಿಡುತ್ತಾನೆ. ಆ ಪುರುಷನಿಂದ ಚಿಂತಿತವಾದ ಶರೀರವನ್ನು ಮತ್ತೆ ಕೊಟ್ಟು ಹುಟ್ಟಿಸುತ್ತಾನೆ. ಈ ಮುಖ್ಯ ಪ್ರಾಣನ ಮಹಿಮೆಯನ್ನು ತಿಳಿದ ಜ್ಞಾನಿಯ ವಂಶವು ಅವಿಚ್ಛಿನ್ನವಾಗಿ ಬೆಳೆಯುತ್ತದೆ. ಇದು ಇಹಲೋಕದ ಫಲವು ಪಾರತ್ರಿಕವಾದ ಮೋಕ್ಷವು ದೊರೆಯುತ್ತದೆ. ಇದಕ್ಕೆ ಸಂವಾದ ರೂಪವಾದ ಶ್ರುತಿಯು ಉಂಟು. ಅದು ಹೇಳುತ್ತದೆ : -

ಮುಖ್ಯಪ್ರಾಣನ ಉತ್ಪತ್ತಿ, ಅವನ ಪಂಚರೂಪಗಳಿಂದ ಶರೀರದಲ್ಲಿ ಅವಸ್ಥಾನ, ಸ್ವಾಮಿತ್ವ, ಆಧ್ಯಾತ್ಮ, ಆಧಿದೈವ, ಆದಿಭೂತಗಳಲ್ಲಿ ಅವನ ವ್ಯಾಪಾರ, ವಿಭುತ್ವ ಇತ್ಯಾದಿಗಳನ್ನು ವಿಶೇಷವಾಗಿ ತಿಳಿದುಕೊಂಡ ಜ್ಞಾನಿಯು ಮುಕ್ತಿಯನ್ನು ಪಡೆಯುತ್ತಾನೆ. ಎಂಬುದರಲ್ಲಿ ಸಂಶಯವಿಲ್ಲ. ಅದಕ್ಕಾಗಿಯೇ ಅಮೃತಮಶ್ನುತೇ ಎಂದು ದ್ವಿರುಕ್ತಿಯು.

*// ಇತಿ ತೃತೀಯ ಪ್ರಶ್ನೆಯು //*

★ ★ ★

# ಅಥ ಚತುರ್ಥಪ್ರಶ್ನಃ

**ಅಥ ಹೈನಂ ಸೌರ್ಯಾಯಣೀ । ಗಾರ್ಗ್ಯಃ ಪಪ್ರಚ್ಛ । ಭಗವನ್ನೇತಸ್ಮಿನ್ ಪುರುಷೇ ಕಾನಿ ಸ್ವಪಂತಿ । ಕಾನ್ಯಸ್ಮಿನ್ ಜಾಗ್ರತಿ । ಕತರ ಏಷ ದೇವಃ ಸ್ವಪ್ನಾನ್ಪಶ್ಯತಿ । ಕಸ್ಯೈತತ್ಸುಖಂ ಭವತಿ । ಕಸ್ಮಿನ್ ಸರ್ವೇ ಪ್ರತಿಷ್ಠಿತಾ ಭವಂತೀತಿ ॥ 1 ॥**

ಅವತಾರಿಕಾ : ಗರ್ಗಗೋತ್ರೋತ್ಪನ್ನನಾದ ಸೌರ್ಯಾಯಣಿಯು ಗುರುಗಳಲ್ಲಿ ಪ್ರಶ್ನೆ ಮಾಡುತ್ತಾನೆ. ಹಿಂದಿನ ಮಂತ್ರಗಳಿಂದ ಪ್ರಾಣನೇ ಮೊದಲಾಗಿ ಸಮಸ್ತಚೇತನ ಅಚೇತನ ಜಗತ್ತು ಭಗವಂತನ ಅಧೀನವೆಂದು ತಿಳಿಸಲ್ಪಟ್ಟಿದೆ. ಈಗ ಆ ಪರಮಾತ್ಮನ ಅಧೀನವು ಮನುಷ್ಯನ ಜಾಗ್ರದಾವಸ್ಥೆ ಮಾತ್ರವಲ್ಲ ಸುಷುಪ್ತಿಸ್ವಪ್ನಾವಸ್ಥೆಯಲ್ಲಿಯೂ ಶ್ರೀಶನ ಅಧೀನವೇ ಆಗಿರುವುದೆಂಬ ಪ್ರಮೇಯವನ್ನು ತಿಳಿಸಲು ತಿಳಿಯಲೂ ಸೌರ್ಯಾಯಣಿಯ ಪ್ರಶ್ನೆ.

**ಅಥ ಹೈನಂ ಸೌರ್ಯಾಯಣೀ । ಉಕ್ತಂ ಪ್ರಾಣಾದೇಃ ಅಖಿಲಸ್ಯಾಪಿ ಜಗತೋ ಭಗವದಧೀನತ್ವಮ್ । ತನ್ನ ಕೇವಲಂ ಜಾಗ್ರದವಸ್ಥಾಯಾಂ ಕಿಂ ನಾಮ ಸ್ವಪ್ನಸುಷುಪ್ತ್ಯೋರಪಿ ಇತಿ ದರ್ಶಯಿತುಂ ಉತ್ತರೋ ಗ್ರಂಥಃ । ಭಗವನ್ ಏತಸ್ಮಿನ್ ಪುರುಷೇ ಶರೀರಿಣಿ ಸ್ವಪತಿ ಸತಿ ಕಾನಿ ದೈವಾನಿ ಸ್ವಪಂತಿ ? ಸ್ವವ್ಯಾಪಾರಾದುಪರಮಂತೇ । ಭಾವ್ಯಂ ಹಿ ಕೇಷಾಂಚಿತ್ ವ್ಯಾಪಾರೋಪರಮೇಣ । ಅನ್ಯಥಾ ಸ್ವಾಪಸ್ಯೈವ ಅಸಂಭವಾತ್ । ಸ್ವಾಪೋ ದ್ವಿವಿಧಃ । ಸ್ವಪ್ನಸುಷುಪ್ತಿಭೇದಾತ್ । ತತ್ರ ಸ್ವಪ್ನೇ ಯ ಏಷ ದೇವಃ ಸ್ವಪ್ನಾನ್ ಸ್ವಪ್ನಸ್ಥಾನ್ ಪದಾರ್ಥಾನ್ ಪಶ್ಯತಿ ಸ ಕತರಃ ? ಸರ್ವೇಂದ್ರಿಯಾಣಾಂ ಉಪರತತ್ವಾತ್ ಕೇನ**

**ಇಂದ್ರಿಯದೇವೇನ ಜೀವಃ ಸ್ವಪ್ನಪದಾರ್ಥಾನ್ ಅನುಭವತಿ ಇತ್ಯಭಿಪ್ರಾಯಃ । ಸುಷುಪ್ತೌ ಚ ಯತ್ ಸುಖಂ ಭವತಿ ತತ್ಕಸ್ಯ ? ತದೋಪರತಕರಣಸ್ಯ ಜೀವಸ್ಯ ವಿಷಯಸಂಸರ್ಗಾದ್ಯಭಾವೇನ ಕಥಂ ಸುಖಾನುಭವೋ ಘಟತ ಇತ್ಯಾಶಯಃ । ಏತೇ ಚ ಸ್ವಪಂತೋ ಜಾಗ್ರತಃ ಸ್ವಪ್ನಾದ್ಯವಸ್ಥಾವಂತಶ್ಚ । ನ ತಾವತ್ ಸ್ವತಂತ್ರಾಃ । ಬಹೂನಾಂ ಸ್ವಾತಂತ್ರ್ಯಾಯೋಗಾತ್ । ನ ಚ ಜೀವಾಧೀನಾಃ । ಕ್ವಚಿತ್ ಅತದ್ವಶತ್ವಸ್ಯಾಪಿ ದರ್ಶನಾತ್ । ನ ಚ ಮುಖ್ಯಪ್ರಾಣಾಧೀನಾಃ । ತಸ್ಯಾಪಿ ಜೀವತ್ವೇನಾನವಸ್ಥಿತೇಃ ಅಸಂಭವಾತ್ ಚ । ಅತಃ ಪರಾಧೀನಾ ಏತೇ ಸರ್ವೇ ಕಸ್ಮಿನ್ ಸಂಪ್ರತಿಷ್ಠಿತಾ ಭವಂತಿ ? ಪರಮೇಶ್ವರಃ ಚೇತ್ ಆಶ್ರಯಃ ತತ್ಕುತಃ ಇತಿ ಪ್ರಶ್ನಾಭಿಪ್ರಾಯಃ ॥ 1 ॥**

**ಭಾವಾರ್ಥ** - ಸುಷುಪ್ತಾವಸ್ಥೆಗಳೂ ಅವನ ಅಧೀನವೇ ಎಂದು ಹೇಳುತ್ತಾರೆ - ಅದನ್ನು ತಿಳಿಯಲು ಸೌರ್ಯಾ-ಯಣೀ ಗಾರ್ಗ್ಯರು ಗುರುಗಳನ್ನು ಪ್ರಶ್ನಿಸುತ್ತಾರೆ.

1) ಜೀವನು ನಿದ್ರಾವಸ್ಥೆಯಲ್ಲಿದ್ದಾಗ ಯಾವ ತತ್ತ್ವಾಭಿಮಾನಿಗಳು ತಮ್ಮ ಕಾರ್ಯದಿಂದ ವಿರಮ್ಯರಾಗುತ್ತಾರೆ ? (ತಮ್ಮ ವ್ಯಾಪಾರದಿಂದ ಉಪರತರಾಗುತ್ತಾರೆ) ಹಾಗೆ ಕೆಲವರಾದರೂ ಉಪರತಿಯನ್ನು ಹೊಂದದೆ ಹೋದರೆ ನಿದ್ರಾವಸ್ಥೆಯೇ ಇಲ್ಲದೆ ಹೋಗಬೇಕಾದೀತು ।

2) ಹೀಗೆ ಜೀವನು ನಿದ್ರಿಸುತ್ತಿರುವಾಗ ಯಾವ ದೇವತೆಗಳು ಜಾಗ್ರತರಾಗಿ ವ್ಯಾಪಾರ ಮಾಡುತ್ತಿರುತ್ತಾರೆ? ಈ ಶರೀರದ ಅವಸ್ಥಾನಕ್ಕಾದರೂ ಯಾರಾದರೂ ಅಲ್ಲಿ ಇರಬೇಕಷ್ಟೆ

3) ನಿದ್ರಾವಸ್ಥೆಯು ಎರಡು ವಿಧ. ಅ) ಸ್ವಪ್ನ ಆ) ಸುಷುಪ್ತಿ (ಗಾಢನಿದ್ರೆ). ಸ್ವಪ್ನಾವಸ್ಥೆಯಲ್ಲಿ ಜೀವನು ಯಾವ ಇಂದ್ರಿಯ ದೇವತೆಯ ಸಹಾಯದಿಂದ ಸ್ವಪ್ನ ಪದಾರ್ಥಗಳನ್ನು ನೋಡುತ್ತಾನೆ? ಅನುಭವಿಸುತ್ತಾನೆ?

4) ಸುಷುಪ್ತಾವಸ್ಥೆಯಲ್ಲಿ ಜೀವನು ಸುಖವನ್ನು ಅನುಭವಿಸುತ್ತಾನೆ, ಅವನ ಎಲ್ಲಾ ಇಂದ್ರಿಯಗಳೂ ಆಗ ಉಪ-ರತಿಯನ್ನು ಹೊಂದಿರುತ್ತವೆ; ವಿಷಯ ಸಂಬಂಧವೇ ಇರುವುದಿಲ್ಲ. ಸುಖಾನುಭವವು ಯಾರಿಗೆ ಹೇಗೆ ಉಂಟಾಗುತ್ತದೆ ?

5) ನಿದ್ರಿಸುತ್ತಿರುವ ಜೀವನು ಜಾಗ್ರತ ಅಥವಾ ಸ್ವಪ್ನಾವಸ್ಥೆಯಲ್ಲಿಯೂ ಸ್ವತಂತ್ರನಲ್ಲ. ಬಹುಜನರು ಸ್ವತಂತ್ರರಿರಲು ಸಾಧ್ಯವೂ ಅಲ್ಲ. ಮುಖ್ಯಪ್ರಾಣನೂ ಜೀವನೇ ಆದುದರಿಂದ ಅವನ ಅಧೀನವೂ ಅಲ್ಲ. ಓಂ ಅನವಸ್ಥಿತೇರ ಸಂಬವಾಚ್ಚ ನೇತರಃ ಓಂ ಎಂಬ ಬ್ರಹ್ಮಸೂತ್ರವೂ ಇದೆ (ಬ್ರ.ಸೂ. 1-2-17) ಆದ್ದರಿಂದ ಸಕಲದೇವತೆಗಳೂ ಪರಾಧೀನರೇ ಆದಮೇಲೆ ಯಾರಲ್ಲಿ ಅವರುಗಳು ಆಶ್ರಯ ಪಡೆದಿರುತ್ತಾರೆ? ಪರಮೇಶ್ವರನಲ್ಲಿ ಆಶ್ರಿತರೆಂದರೆ ಅದು ಹೇಗೆ ? ಹೀಗೆ ಪ್ರಶ್ನೆಯ ಅಭಿಪ್ರಾಯವು.

**ತಸ್ಮೈ ಸ ಹೋವಾಚ । ಯಥಾ ಗಾರ್ಗ್ಯಮರೀಚಯೋಽರ್ಕಸ್ಯಾಸ್ತಂ-
ಗಚ್ಛತಃ ಸರ್ವಾ ಏತಸ್ಮಿಂಸ್ತೇಜೋಮಂಡಲಂ ಏಕೀಭವಂತಿ ತಾಃ ಪುನ-
ರುದಯತಃ ಪ್ರಚರಂತ್ಯೇವಂ ಹ ವೈ ತತ್ಸರ್ವಂ ಪರೇ ದೇವೇ ಮನ-
ಸ್ಯೇಕೀಭವತಿ । ತೇನ ತರ್ಹ್ಯೇಷ ಪುರುಷೋ ನ ಶೃಣೋತಿ ನ ಪಶ್ಯತಿ**

**ನ ಜಿಘ್ರತಿ ನ ರಸಯತೇ ನ ಸ್ಪೃಶತೇ ನಾಭಿವದತೇ ನಾದತ್ತೇ ನಾನಂದ-**
**ಯತೇ ನ ವಿಸೃಜತೇ ನೇಯಾಯತೇ ಸ್ವಪಿತೀತ್ಯಾಚಕ್ಷತೇ ॥ 2 ॥**

ಏವಂ ಪೃಷ್ಟವತೇ ಸಹೋವಾಚ- ಯಥಾ ಇತ್ಯಾದಿ । ಹೇ ಗಾರ್ಗ್ಯ । ಯಥಾಽರ್ಕಸ್ಯಾಸ್ತಮದರ್ಶನಂ ಗಚ್ಛತಃ ಸರ್ವಾ ಏವ ಮರೀಚಯಃ ಸರ್ವೇಽಪಿ ರಶ್ಮಯಃ ಏತಸ್ಮಿನ್ ದೃಶ್ಯಮಾನೇ ತೇಜೋಮಂಡಲೇ ಏಕೀಭವಂತಿ । ತತ್ರೈಕೀಭೂತಾ ಇವ ದೃಶ್ಯಂತೇ । ಪ್ರಕಾಶಾದಿವ್ಯಾಪಾರಾದುಪರಮಂತ ಇತಿ ಯಾವತ್ । ತಾಃ ಪುನಸ್ತೇ ತು ರಶ್ಮಯೋಽರ್ಕಸ್ಯ ಪುನರುದಯತಃ ಸತಃ ಪ್ರಚರಂತಿ । ತಸ್ಮಾನ್ಮಂಡಲಾನ್ನಿರ್ಗತ್ಯ ಲೋಕೇ ಪ್ರಚರಂತೀವ ದೃಶ್ಯಂತೇ । ಸ್ವವ್ಯಾಪಾರಂ ಕುರ್ವಂತೀತಿ ಯಾವತ್ । ಏವಂ ಖಲ್ವೇತತ್ಸರ್ವಂ ಶರೀರಿತದಿಂದ್ರಿಯದೇವತಾಜಾತಂ ಚ ಪರೇ ದೇವೇ ವಿಷ್ಣೌ ಸ್ವಪ್ನಾವಸ್ಥಾಯಾಂ ಮನಸಿ ಸ್ಥಿತೇ ಸುಷುಪ್ತೌ ಹೃದಯಾಕಾಶಸ್ಥೇ ಏಕೀಭವಂತಿ । ಜಾಗರೇ ತು ಪ್ರಚರಂತಿ । ಅನೇನ ಸ್ವಪ್ನೇ ಮನೋವ್ಯತಿರಿಕ್ತಾನಾಮೇವೋಪರಮಃ । ಸುಷುಪ್ತೌ ತು ತಸ್ಯಾಪೀತಿ ಸೂಚಿತಮ್ । ಯತ ಏವಂ ತೇನ ಕಾರಣೇನ ತರ್ಹಿ ತದಾ ಸ್ವಾಪೇ ಏಷ ಪುರುಷೋ ಜೀವೋ ನ ಶೃಣೋತೀತ್ಯಾದಿ । ನೇಯಾಯತೆ ನ ಗಚ್ಛತಿ । ಸ್ವಪ್ನವಿವಕ್ಷಯಾ ಚೈತತ್ । ಸುಷುಪ್ತೌ ತು ನ ಮನುತ ಇತ್ಯಾದ್ಯಪಿ ದ್ರಷ್ಟವ್ಯಮ್ । ಯತ ಏವಂ ಜೀವಃ ಸ್ವಾಪೇ ಪರಂ ದೇವಂ ಪ್ರಾಪ್ನೋತಿ । ಅತ ಏವ ಹಿ ತದಾ ಸ್ವಪಿತೀತ್ಯಾಚಕ್ಷತೇ ವಿದ್ವಾಂಸಃ । ಸ್ವಂ ಸ್ವತಂತ್ರಂ ದೇವಮಪ್ಯೇತೀತಿ ಕೃತ್ವೇತಿ ॥ 2 ॥

ಖಂಡಾರ್ಥ - ವಾಕ್ಯಗಳ ಭಾವಸಂಗ್ರಹ :

ಪಿಪ್ಪಲಾದರು ಗಾರ್ಗ್ಯರಿಗೆ ಹೇಳಿದರು :- ಹೇಗೆ ಅಸ್ತಂಗತನಾದ ಸೂರ್ಯನ ದರ್ಶನವಿಲ್ಲದುದರಿಂದ ಸೂರ್ಯ ಕಿರಣಗಳೆಲ್ಲವೂ ಸೂರ್ಯ ಮಂಡಲದಲ್ಲಿ ಒಂದಾಯಿತೆಂದು ಹೇಗೆ ಹೇಳುತ್ತೇವೆಯೋ ಮತ್ತು ಸೂರ್ಯೋದಯವಾದಾಗ ಪುನಃ ರಶ್ಮಿಗಳ ಪ್ರಸಾರದಿಂದ ಪ್ರಕಾಶನಾದಿ ವ್ಯಾಪಾರೋನ್ಮುಖವಾಗುವುದೋ, ಹಾಗೆಯೇ ಜೀವನು ಮತ್ತು ಇಂದ್ರಿಯ ದೇವತೆಗಳೆಲ್ಲರೂ ಸ್ವಪ್ನಾವಸ್ಥೆಯಲ್ಲಿ ಮನಸ್ಸಿನಲ್ಲಿ ಸ್ಥಿತನಾದ ಅದೇ ಭಗವಂತನನ್ನೂ ಸುಷುಪ್ತಾವಸ್ಥೆಯಲ್ಲಿ ಹೃದಯಾಕಾಶದಲ್ಲಿ ಸ್ಥಿತನಾದ ಅದೇ ಭಗವಂತನನ್ನೂ ಹೊಂದುತ್ತಾರೆ. (ಒಂದು ಕಡೆ ಸೇರುತ್ತಾರೆ). ಈ ಕಾರಣದಿಂದ ಜೀವನ ಶರೀರದಲ್ಲಿ ಬಾಹ್ಯೇಂದ್ರಿಯ ವ್ಯಾಪಾರಗಳಾವುದೂ ಇಲ್ಲವಾದುದರಿಂದ ಜೀವನು ನಿದ್ರಿಸುತ್ತಾನೆ - ಸ್ವಪಿತಿ ಎಂದು ಜ್ಞಾನಿಗಳು ಹೇಳುತ್ತಾರೆ.

1) ಸ್ವಪ್ನಾವಸ್ಥೆಯಲ್ಲಿ ಮನಸ್ಸೇಂದ್ರಿಯ ಹೊರತು ಸಕಲೇಂದ್ರಿಯಗಳೂ ಉಪರತವಾಗುತ್ತವೆ. ಎಂದರೆ ಇಂದ್ರೀಯ ದೇವತೆಗಳೆಲ್ಲರೂ ಮನಸ್ಸಿನಲ್ಲಿ ಇಂದ್ರಿಯಪ್ರೇರಕತ್ವೇನ ಅವಸ್ಥಿತನಾದ ತೈಜಸಾತ್ಮಕನಾದ ಭಗವಂತನನ್ನು ಹೊಂದುತ್ತಾರೆ. ಸಂಧ್ಯಾಕಾಲದಲ್ಲಿ ಹೇಗೆ ಗೋವುಗಳು ಕೊಟ್ಟಿಗೆಯಲ್ಲಿ ಒಂದೇ ಸ್ಥಳದಲ್ಲಿ ಐಕ್ಯವಾಗುವುವೋ, ಹಾಗೆ ಆ ದೇವತೆಗಳು ಮನಸ್ಸಿನಲ್ಲಿ ಭಗವಂತನ ಸಮೀಪಕ್ಕೆ ಬರುತ್ತಾರೆ; ಬಂದು ಅಲ್ಲಿ ಉಪಸ್ಥಿತರಾಗುತ್ತಾರೆ. ಇದಕ್ಕೆ ಸ್ಥಾನೈಕ್ಯವೆಂದು ಹೆಸರು; ಸ್ವರೂಪೈಕ್ಯವಲ್ಲ.

2) ಸೂರ್ಯೋದಯ, ಅಸ್ತಮಯಗಳು ನಮ್ಮಗಳ ದೃಷ್ಟಿಯಿಂದ ಮಾತ್ರ; ವಾಸ್ತವವಾಗಿ ಸೂರ್ಯನ ರಶ್ಮಿಗಳು ಅಸ್ತವೂ ಆಗುವುದಿಲ್ಲ; ಪ್ರಸರಣವೂ ಆಗುವುದಿಲ್ಲ. ಒಂದೇ ರೀತಿಯಿಂದ ಸೂರ್ಯಮಂಡಲದಿಂದ ಹೊರಟು ಪ್ರಕಾಶನಾದಿ ವ್ಯಾಪಾರಗಳನ್ನು ಒಂದಲ್ಲಾ ಒಂದು ಕಡೆ ಮಾಡುತ್ತಲೇ ಇರುತ್ತವೆ. ನಮ್ಮ ದೃಷ್ಟಿಯಿಂದ ರಶ್ಮಿಗಲು ಮರೆಯಾದರೆ ಅಸ್ತಮಯವೆಂದೂ ಹೇಳುತ್ತೇವೆ. ಹಾಗೆಯೇ ಸ್ವಪ್ನ ಸುಷುಪ್ತಾವಸ್ಥೆಯಲ್ಲಿ ಮನಸ್ಸಿನಲ್ಲಿ ಮತ್ತು ಹೃದಯಾಕಾಶದಲ್ಲಿ ಸ್ಥಿತನಾದ ಭಗವಂತನ ಸಮೀಪಕ್ಕೆ ಇಂದ್ರಿಯ ದೇವತೆಗಳು ಹೋಗುತ್ತಾರೆ. ಜಾಗ್ರದವಸ್ಥೆಯಲ್ಲಿ ಇಂದ್ರಿಯ ಗೋಳಕಗಳಲ್ಲಿ ಸ್ಥಿತರಾಗಿ ವ್ಯಾಪಾರ ಮಾಡುತ್ತಾರೆಂದು ತಿಳಿಯಬೇಕು. ಅದು ಕಾರಣವೇ ಆ ಎರಡೂ ಅವಸ್ಥೆಗಳಲ್ಲಿ ಯಾವ ರೀತಿ ಬಾಹ್ಯವ್ಯಾಪಾರಗಳೂ ಆಗುವುದಿಲ್ಲವೆಂದು ಉಪನಿಷತ್ತು ಸ್ಪಷ್ಟವಾಗಿ ಹೇಳುತ್ತದೆ.

3) ಸ್ವಪ್ನಾವಸ್ಥೆಯಲ್ಲಿ ಮನಸ್ಸೇಂದ್ರಿಯವು ವಿಶ್ರಾಂತಿಯನ್ನು ಪಡೆಯುವುದಿಲ್ಲ; ಉಪರತವಾಗುವುದಿಲ್ಲ; ಸುಷುಪ್ತಾವಸ್ಥೆಯಲ್ಲಿ ಮನಸ್ಸೂ ಕೂಡ ಉಪರತವಾಗುತ್ತದೆ. ಆಗ ನ ಮನುತೇಪಿ – ಏನೂ ತಿಳಿಯುವುದಿಲ್ಲ. ಸುಖಾನುಭವ ಮಾತ್ರ ಉಂಟು.

4) ಸ್ವಪಿತಿ–ಸ್ವಂ = ಸ್ವತಂತ್ರಂ ಪರದೇವಂ, ಅಪ್ಯೇತಿ = ಪ್ರಾಪ್ನೋತಿ ಸ್ವಾಪೇ; ಆದ್ದರಿಂದಲೇ ಸ್ವಪಿತಿ ಎಂದು ಜ್ಞಾನಿಗಳು ಹೇಳುತ್ತಾರೆ.

## ಪ್ರಾಣಾಗ್ನಿವಿದ್ಯೆ

**ಪ್ರಾಣಾಗ್ನಯ ಏವೈತಸ್ಮಿನ್ಪುರೇ ಜಾಗ್ರತಿ । ಗಾರ್ಹಪತ್ಯೋ ಹ ವಾ ಏಷೋಽಪಾನೋ ವ್ಯಾನೋಽನ್ವಾಹಾರ್ಯಪಚನೋ ಯದ್ಗಾರ್ಹಪತ್ಯಾತ್ಪ್ರಣೀಯತೇ । ಪ್ರಣಯನಾದಾಹವನೀಯಃ ಪ್ರಾಣಃ । ಯದುಚ್ಛ್ವಾಸನಿಃಶ್ವಾಸೌ ಏತಾವಾಹುತೀ ಸಮಂ ನಯತಿ ಸ ಸಮಾನೋ ಮನೋ ಹ ವಾ ಯಜಮಾನಃ ಇಷ್ಟಂ ಫಲಮೇವೋದಾನಃ । ಸ ಏನಂ ಯಜಮಾನಮಹರಹಃ ಬ್ರಹ್ಮ ಗಮಯತಿ ॥ 3 ॥**

ಕಾನಿ ಜಾಗ್ರತಿ ಇತ್ಯಸ್ಯ ಉತ್ತರಮ್- ಪ್ರಾಣಾಗ್ನಯಃ ಇತಿ । ಸ್ವಾಪಕಾಲೇ ಏತಸ್ಮಿನ್ ಪುರೇ ಶರೀರೇ ಪ್ರಾಣಾಃ ಪ್ರಾಣಾದಿಮುಖ್ಯಪ್ರಾಣರೂಪಾಣ್ಯೇವಾಗ್ನಯಃ ಪ್ರಾಣಾಗ್ನಯಃ ಏವ ಜಾಗ್ರತಿ ಶರೀರಧಾರಣಾದಿ ಸ್ವವ್ಯಾಪಾರಂ ಕುರ್ವಂತಿ । ಅಗ್ನಯ ಇತ್ಯುಪಲಕ್ಷಣಮ್ । ಋತ್ವಿಗ್ಭಾವಸ್ಯಾಪಿ ವಕ್ಷ್ಯಮಾಣತ್ವಾತ್ । ಕಥಂ ತೇಷಾಮಗ್ನ್ಯಾದಿತ್ವಮಿತ್ಯತಃ ಉಚ್ಯತೆ- ಗಾರ್ಹಪತ್ಯ ಇತ್ಯಾದಿ । ತೇಷಾಂ ಪ್ರಾಣಾನಾಂ ಏಷಃ ಅಪಾನಃ ಗಾರ್ಹಪತ್ಯಃ । ಪಶ್ಚಿಮತ್ವಸಾಮ್ಯಾತ್ । ವ್ಯಾನೋಽನ್ವಾಹಾರ್ಯಪಚನಃ ದಕ್ಷಿಣಾಗ್ನಿಃ ಹೊಮಾಂಗತ್ವಸಾಮ್ಯಾತ್ । ಯದ್ಯಸ್ಮಾತ್ ಗಾರ್ಹಪತ್ಯಾತ್ ಆಹವನೀಯಃ ಪ್ರಣೀಯತೆ ಪ್ರಾಣೊಽಪಿ ಅಪಾನಾತ್ ತಸ್ಮಾತ್ ಪ್ರಣಯನಾತ್ ಪ್ರಣಯನಸಾಮ್ಯಾತ್ ಪ್ರಾಣಃ ಆಹವನೀಯಃ । ಯದ್ಯಸ್ಮಾತ್ ದ್ವಾವೇತಾವುಚ್ಛ್ವಾಸನಿಃಶ್ವಾಸೌ ತೇ ಏತಾವಾಹುತೀಸಮಂ ಯಥಾಕಾಲಂ ನಯತಿ ತಸ್ಮಾತ್ ಅಹುತ್ಯೋಃ

**ಸಮಂ ನಯನಸಾಮ್ಯಾತ್ ಸಮಾನಃ । ಸೋಽಧ್ವರ್ಯುರಿತಿ ಯಾವತ್ । ತತ್ರ ಮನನಾನ್ಮನೋ ಜೀವಃ ಯಜಮಾನಃ ಪರಾಧೀನಫಲತ್ವಸಾಮ್ಯಾದಿತ್ಯುತ್ತರಾರ್ಥಂ ವಚನಮ್ । ಅನ್ಯಥಾ ಪೂರ್ವಂ ಪ್ರಾಣಾದೀನಾಮೇವ ಪ್ರಕೃತತ್ವೇನ ಜೀವಸ್ಯ ಯಜಮಾನತ್ವೋಕ್ತಿರಯುಕ್ತಾ ಸ್ಯಾತ್ । ಅತಃ ಉತ್ತರವಾಕ್ಯೇ ಉದಾನಸ್ಯ ಯಜಮಾನಫಲಪ್ರತಿಪಾದಕತ್ವೇನ ಉದ್ಗಾತೃತ್ವಾರ್ಥಂ ಜೀವಸ್ಯ ಯಜಮಾನತ್ವೋಕ್ತಿರುಪಪನ್ನೇತಿ ಭಾವಃ । ಉದಾನಃ ಇಷ್ಟಫಲಂ ಯಜ್ಞಫಲಂ ಪ್ರತಿಪಾದಕಃ ಉದ್ಗಾತೇತಿ ಯಾವತ್ । ಫಲಪ್ರತಿಪಾದಕತ್ವಸಾಮ್ಯಾತ್ । ಕಥಂ ಉದಾನಸ್ಯ ಫಲಪ್ರತಿಪಾದಕತ್ವಮ್ । ಸ ಉದಾನೊ ಹಿ ಏನಂ ಯಜಮಾನಂ ಜೀವಂ ಅಹರಹಃ ಪ್ರತಿದಿನಂ ಸುಪ್ತೌ ಇತಿ ಯಾವತ್ । ಬ್ರಹ್ಮ ಸುಷುಮ್ನಾಗತಂ ಗಮಯತಿ ಪ್ರಾಪಯತೀತಿ ಯಃ ಏವಂ ವೇದ ತೇನೈವಮಿಷ್ಟಂ ಭವತಿ । ನಿತ್ಯಂ ಬ್ರಹ್ಮಪ್ರಾಪ್ತಿಫಲಂ ಚ ತಸ್ಯ ಭವತೀತಿ ಜ್ಞಾಪನಾಯ ಇದಮುಕ್ತಮ್ ॥ 3 ॥**

**ಭಾವಾರ್ಥ** : ಕಾನಿ ಜಾಗ್ರತಿ – ಎಂದು ಕೇಳಿದ ಪ್ರಶ್ನೆಗೆ ಉತ್ತರ ಹೇಳುತ್ತಾರೆ :– ಸ್ವಾಪಕಾಲದಲ್ಲಿ (ನಿದ್ರಾವಸ್ಥೆಯಲ್ಲಿ) ಈ ಶರೀರದಲ್ಲಿ ಪಂಚ ಮುಖ್ಯಪ್ರಾಣ ರೂಪವಾದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೇ ಶರೀರ ಧಾರಣಾದಿ ವ್ಯಾಪಾರವನ್ನು ಮಾಡುತ್ತಾರೆ. ಅವರು ಅಗ್ನಿ ಋತ್ವಿಕ್ ಸದೃಶ್ಯರು. ಹೇಗೆಂದರೆ :–

ಜೀವನ ನಿದ್ರಾಕಾಲದಲ್ಲಿ ಮುಖ್ಯಪ್ರಾಣನ ರೂಪಗಳಾದ ಐದು ಪ್ರಾಣಾಗ್ನಿಗಳು ಎಚ್ಚರದಿಂದಿದ್ದು, ಶರೀರಧಾರಣಾದಿ ಕ್ರಿಯೆಗಳನ್ನು ಮಾಡುತ್ತಾನೆ. ಪಂಚ ಪ್ರಾಣರನ್ನು ಪ್ರಾಣಾಗ್ನಿಗಳೆನ್ನಲು ಕಾರಣವೇನೆಂದರೆ ಯಾಗದಲ್ಲಿ ಪಶ್ಚಿಮ ದಿಕ್ಕಿನಲ್ಲಿರುವ ಅಗ್ನಿಯು ಗಾರ್ಹಪತ್ಯ ಎಂದು ಕರೆಯಲ್ಪಡುವಂತೆ, ಶರೀರದ ಪಶ್ಚಿಮ ದ್ವಾರವಾದ ಗುದದಲ್ಲಿರುವ ಆಪಾನನೇ ಗಾರ್ಹಪತ್ಯಾಗ್ನಿ ಎನಿಸುವನು. ಶ್ವಾಸರೂಪವಾದ ಆಹುತಿಯನ್ನು ಶರೀರದ ಸರ್ವನಾಡಿಗಳಿಗೂ ಒಯ್ಯುವುದರಿಂದ ಶ್ವಾಸ ಹೋಮಕ್ಕೆ ಅಂಗವಾದ ವ್ಯಾನವಾಯುವು ದಕ್ಷಿಣಾಗ್ನಿ ಎನಿಸುವನು. ಗಾರ್ಹಪತ್ಯಾಗ್ನಿಯಿಂದ ತಂದು ಆವಹನೀಯ ಕುಂಡದಲ್ಲಿರುವ ಅಗ್ನಿಯೇ ಅವಹನೀಯ ಎನಿಸುವಂತೆ, ಆಪಾನದಿಂದ ಪ್ರತ್ಯೇಕಿಸಲ್ಪಡುವುದರಿಂದ ಪ್ರಾಣನೇ ಆಹವನೀಯನೆನಿಸುತ್ತಾನೆ. ಆಹುತಿಯನ್ನು ಕೊಡುವವನು ಆಧ್ವರ್ಯು ಎನಿಸುವುದರಿಂದ ಶ್ವಾಸಯಾಗದಲ್ಲಿ ಸಮಾನನು ಉಚ್ಛ್ವಾಸ ನಿಶ್ವಾಸಗಳೆಂಬ ಆಹುತಿಗಳನ್ನು ಆಯಾಕಾಲದಲ್ಲಿ ನಾಡಿಗಳಲ್ಲಿ ಅವುಗಳ ಗಾತ್ರಕ್ಕೆ ಸಮನಾಗಿ ಕೊಡುವುದರಿಂದ ಸಮಾನನೇ ಅಧ್ವರ್ಯು ಎನಿಸುವನು.

ಋತ್ವಿಜರು ಮಾಡುವ ಸಹಾಯದಿಂದ ಸ್ವರ್ಗಾದಿ ರೂಪಫಲವನ್ನು ಹೊಂದುವವನೇ ಯಜಮಾನನಾಗಿರುವುದರಿಂದ, ಉದಾನವಾಯುವಿನ ಸಹಾಯದಿಂದ ನಿದ್ರಾಕಾಲದಲ್ಲಿ ಪ್ರಾಜ್ಞಪ್ರಾಪ್ತಿರೂಪಫಲವನ್ನು ಅನುಭವಿಸುವ ಜೀವನೇ ಯಜಮಾನ. ಯಜಮಾನನಿಗೆ ಯಜ್ಞಫಲವನ್ನು ತಂದುಕೊಡುವ ಸಾಮವನ್ನು ಹಾಡುವುದರಿಂದ ಉದ್ಗಾತೃವೆನಿಸುವವನು, ಪ್ರತಿದಿನವೂ, ಸ್ವಾಪ್ನಕಾಲದಲ್ಲಿ ಜೀವನನ್ನು ಸುಷುಮ್ನಾದಲ್ಲಿರುವ ಪ್ರಾಜ್ಞನಾಮಕ ಪರಮಾತ್ಮನ ಬಳಿಗೆ ಒಯ್ಯುವುದರ ಮೂಲಕ ಶ್ವಾಸಯಜ್ಞದ ಫಲವನ್ನು ಜೀವನಿಗೆ ತಂದುಕೊಡುವುದರಿಂದ ಉದಾನವೇ ಉದ್ಗಾತೃವೆನಿಸುವನು.

ಈ ಉದಾನನಿಗೆ ಫಲಪ್ರತಿಪಾತಕತ್ವ ಹೇಗೆಂದರೆ :– ಸುಪ್ತನಾದ ಜೀವನನ್ನು ಉದಾನರೂಪ ಮುಖ್ಯಪ್ರಾಣನು ಪ್ರತಿ ನಿತ್ಯವೂ ಸುಷುಮ್ನಾ ನಾಡಿಯಲ್ಲಿ ಸ್ಥಿತನಾದ ಬ್ರಹ್ಮನಲ್ಲಿಗೆ ಕೊಂಡೊಯ್ಯುತ್ತಾನೆ. ಹೀಗೆ ನಿತ್ಯವೂ ಬ್ರಹ್ಮಪ್ರಾಪ್ತಿ ಫಲವು

ಉದಾನನಿಂದಲೇ ಉಂಟಾಗುತ್ತದೆ. ಹೀಗೆ ಯಾರು ತಿಳಿಯುತ್ತಾರೆಯೋ, ಅವರಿಗೆ ಈ ರೀತಿಯ ಇಷ್ಟಪ್ರಾಪ್ತಿಯಾಗುತ್ತದೆ. (ಯ ಏವಂ ವೇದ ತೇನ್ನೈವಮಿಷ್ಟಂ ಭವತಿ)

ಅಂಗನೇತೃತ್ವಾತ್ ಅಗ್ನಿಃ ದೇಹದಲ್ಲಿನ ವ್ಯಾಪಾರವೆಲ್ಲವೂ ಪ್ರಾಣನ ಮೂಲಕವೇ ನಡೆಯುವುದರಿಂದ ಪಂಚ-ಪ್ರಾಣಗಳು ಅಗ್ನಿಶಬ್ದವಾಚ್ಯಗಳು.

**ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ ಯತ್ ದೃಷ್ಟಂ ದೃಷ್ಟ-ಮನುಪಶ್ಯತಿ ಶ್ರುತಂ ಶ್ರುತಮೇವಾರ್ಥಮನುಶೃಣೋತಿ ದೇಶದಿಗಂತರೇ ಚ । ಪ್ರತ್ಯನುಭೂತಂ ಪುನಃ ಪುನಃ ಪ್ರತ್ಯನುಭವತಿ । ದೃಷ್ಟಂ ಚಾದೃಷ್ಟಂ ಚ ಶ್ರುತಂ ಚಾಶ್ರುತಂ ಚಾನುಭೂತಂ ಚಾನನುಭೂತಂ ಚ ಸಚ್ಚಾಸಚ್ಚ ಸರ್ವಂ ಪಶ್ಯತಿ ಸರ್ವಃ ಪಶ್ಯತಿ । ಸ ಯದಾ ತೇಜಸಾಭಿಭೂತೋ ಭವತ್ಯತ್ರೈಷ ದೇವಃ ಸ್ವಪ್ನಾನ್ನ ಪಶ್ಯತಿ ॥ ಅಥ ಯದೇತಸ್ಮಿನ್ ಶರೀರೇ ಸುಖಂ ಭವತಿ ॥ 4 ॥**

ಶರೀರೇ ಸುಖಂ ಭವತಿ ಎಂದರೆ, ಭಗವಂತನ ಶರೀರದಂತೆ ಜ್ಞಾನಸ್ವರೂಪನಾದುದರಿಂದ ಶರೀರನೆನಿಸಿದ ಜೀವನಿಗೆ ಸುಖ ಉಂಟಾಗುತ್ತದೆ ಎಂದು ಅರ್ಥ. ಏಕೆಂದರೆ ಯಾರಿಗೆ ಸುಖವಾಗುವುದು ಎಂಬ ಪ್ರಶ್ನೆಗೆ ಇದು ಉತ್ತರವಾಗಿ ಉಪನಿಷತ್ತಿನಲ್ಲಿ ಬಂದಿದೆ, ಎಲ್ಲಿ ಸುಖವಾಗುತ್ತದೆ ಎಂದಲ್ಲ. ಶರೀರಕ್ಕೆ ಸುಖವಾಗುವುದು ಎಂದೇ ಉತ್ತರದ ಅಭಿಪ್ರಾಯವೆಂದು ಹೇಳುವುದು ಸರಿಯಲ್ಲ. ಏಕೆಂದರೆ ಜಡವಾದ ಶರೀರ ಎಂದು ಶ್ರುತಿ ಇದೆ ಆದ್ದರಿಂದ ಶರೀರ ಶಬ್ದಕ್ಕೆ ಜೀವವೆಂದು ಅರ್ಥೈಸುವುದು ಯುಕ್ತವೇ ಆಗುತ್ತದೆ. ಸ್ಮೃತಿಯಲ್ಲಿಯೂ ಜ್ಞಾನಸ್ವರೂಪತ್ವ ರೂಪವಾದ ಸಾದೃಶ್ಯದಿಂದ ಜೀವನು ವಿಷ್ಣುವಿನ ಶರೀರದಂತೆ ಇರುವುದರಿಂದ ಸುಪ್ತಿಯಲ್ಲಿ ಅವನಿಗೆ ಸುಖವಾಗುವುದು. ಅವನಿಗೆ ಸುಖವಾಗುವುದಕ್ಕಾಗಿಯೇ ಭಗವಂತನು ಸುಪ್ತಿಯನ್ನು ತಂದುಕೊಡುತ್ತಾನೆ.

**ಯತ ಏವಂ ಮನೋವ್ಯತಿರಿಕ್ತಾನಾಮೇವೋಪರಮಃ ಸ್ವಪ್ನೇ ತಸ್ಮಾಜ್ಜೀವಸ್ಯ ಮನಸಾ ಸ್ವಪ್ನದರ್ಶನಂ ಯುಕ್ತಮಿತಿ ಭಾವೇನ ಕತರ ಏಷ ದೇವಃ ಸ್ವಪ್ನಾನ್ ಪಶ್ಯತೀತಿ ತೃತೀಯಪ್ರಶ್ನಸ್ಯ ಪರಿಹಾರ ಉಚ್ಯತೇ-ಅತ್ರೇತ್ಯಾದಿ । ಅತ್ರೈತಸ್ಯಾಮವಸ್ಥಾಯಾಂ ಮನೋವ್ಯತಿರಿಕ್ತೇಂದ್ರಿಯೋಪರಮ ಇತಿ ಯಾವತ್ । ಏಷ ದೇವೋ ಮನೋ ನಾಮಾ ತೇನಾನುಗೃಹಿತೋ ಜೀವ ಇತಿ ಯಾವತ್ । ಸ್ವಪ್ನೇ ಮಹಿಮಾನ-ಮಾತ್ಮನೋ ಮಹತ್ವಮನ್ಯಚ್ಚಾನುಭವತಿ । ತತ್ರ ಚ ಯಮರ್ಥಂ ಪಶ್ಯತಿ ತಂ ಪ್ರಾಕ್ ದೃಷ್ಟಮೇವಾನು-ಪಶ್ಯತಿ । ಯಃ ಪ್ರಾಕ್ ಶೃತಃ ತಂ ಶೃತಮೇವಾರ್ಥಂ ಶಬ್ದಂ ಸ್ವಪ್ನೇಽನುಶೃಣೋತಿ । ಏವಂ ಅನ್ಯದಪಿ ಅನುಭೂತಮೇವ ಅನುಭವತಿ । ನ ಅನನುಭೂತಮ್ । ಕಿಮಸ್ಮಿನ್ನೇವ ದೇಶೇಽನುಭೂತಮನುಭವತಿ ? ನ, ಕಿಂತು ದೇಶಾಂತರೇ ದಿಗಂತರೇ ಚ ಯತ್ರತ್ಯನುಭೂತಂ ಪುನಃಪುನರನುಭೂತಂ ತದೇವ ಸ್ವಪ್ನೇ ಪುನಃಪುನಃ ಪ್ರತ್ಯನುಭವತಿ । ಭ್ರಾಂತ್ಯಾ ತದೇವ ಇದಮಿತಿ ಪ್ರತ್ಯಭಿಜಾನಾತಿ । ನಾಪಿ ಅಸ್ಮಿನ್ನೇವ ಜನನಿ**

**ಅನುಭೂತಮನುಭವತೀತಿ ನಿಯಮಃ ಕಿಂತು ಅಸ್ಮಿನ್ ಜನ್ಮನಿ ದೃಷ್ಟಂ ಅದೃಷ್ಟಂ ಚ ಜನ್ಮಾಂತರೇ ದೃಷ್ಟಮ್ । ಏವಮುತ್ತರತ್ರಾಪಿ ಅನುಭೂತಂ ಅನನುಭೂತಂ ಇಂದ್ರಿಯಾಂತರೇಣ । ಸಚ್ಚ ತದಾನಿಂ ಅಸಚ್ಚ ನಿವೃತ್ತಂ ಚೇತ್ಯೇವಂ ಸರ್ವಂ ಪಶ್ಯತಿ ಜಾನಾತಿ । ಸ್ವಯಂ ಚ ಸರ್ವಃ ನಾನಾಕರ್ಮಭಿಃ ನರವಾನರಾದ್ಯನೇಕಪ್ರಕಾರಃ ಸನ್ ತತ್ಪಶ್ಯತಿ । ಕಸ್ಯೈತತ್ಸುಖಂ ಭವತೀತಿ ಚತುರ್ಥಪ್ರಶ್ನಂ ಪರಿಹರ್ತು-ಮುಚ್ಯತೇ- ಸ ಯದೇತ್ಯಾದಿ । ಏವಂ ಸ್ವಪ್ನೇ ವರ್ತಮಾನಃ ಸ ಜೀವೋ ಯದಾ ತೇಜಸಾ ಭಗವದೀ-ಯೇನಾಭಿಭೂತಃ ಆವೃತೋ ಭವತಿ ಭಗವಂತಂ ಪ್ರವಿಶತೀತಿ ಯಾವತ್ । ಅತ್ರೈತಸ್ಯಾಂ ಸುಷುಪ್ತಿ-ಸಂಜ್ಞಾಯಾಂ ಅವಸ್ಥಾಯಾಂ ಏಷ ದೇವೋ ಮನಃ ಸ್ವಪ್ನಾನ್ ನ ಪಶ್ಯತಿ । ಮನಸೋಽಪ್ಯುಪರತತ್ವಾತ್ ನ ಜೀವಃ ಸ್ವಪ್ನಾನ್ ಪಶ್ಯತೀತಿ ಯಾವತ್ । ಯಸ್ಮಾದೇವಂ ಪರಮೇಶ್ವರತೇಜಸಾಭಿಭೂತೋ ಭವತ್ಯಥ ತಸ್ಮಾತ್ ತತ್ಸನ್ನಿಧಾನಸಾಮರ್ಥ್ಯೋದ್ಭೂತಂ ಯತ್ಸುಖಂ ತದೇತಸ್ಮಿನ್ ಭಗವಚ್ಛರೀರವತ್ ಜ್ಞಾನಾತ್ಮಕತ್ವೇನ ತತ್ಸಾದೃಶ್ಯಯುಕ್ತೇ ಜೀವೇ ಭವತೀತಿ ನ ಕಾಚಿತ್ ಅನುಪಪತ್ತಿರಿತಿ ॥ 4 ॥**

**ಭಾವಾರ್ಥ :** ಸ್ವಪ್ನಾವಸ್ಥೆಯಲ್ಲಿ ಮನಸ್ಸು ಬಿಟ್ಟು ಇತರ ಇಂದ್ರಿಯಗಳೆಲ್ಲವೂ ಉಪರತವಾಗುವುದರಿಂದ ಮನೋದೇವನ ಅನುಗ್ರಹದಿಂದ ವ್ಯವಹಾರಕರ್ತನಾದ ಜೀವನು ತನ್ನ ಮತ್ತು ಇತರ ಮಹತ್ವಗಳನ್ನು ಸ್ವಪ್ನದಲ್ಲಿ ಅನುಭವಿಸುತ್ತಾನೆ. ಈ ಜನ್ಮದಲ್ಲಿಯೋ ನೋಡಿದ್ದ, ಕೇಳಿದ್ದ, ಅನುಭವಿಸಿದ್ದ ವಿಷಯಗಳ ಸದೃಶವಾದ ವಿಷಯಗಳನ್ನೇ ಸ್ವಪ್ನಾವಸ್ಥೆಯಲ್ಲಿ ನೋಡಿ, ಕೇಳಿ, ಅನುಭವಿಸಿ, ಅದೇ ಇದು ಎಂದು ಭ್ರಾಂತನಾಗುತ್ತಾನೆ. ಮತ್ತು ತನ್ನ ಕರ್ಮಾನುಸಾರವಾಗಿ ನರ ವಾನರಾದಿ ಅನೇಕ ಪ್ರಕಾರ ಯೋನಿಗಳಲ್ಲಿದ್ದು ಈ ಮಹಿಮೆಗಳನ್ನು ತಿಳಿಯುತ್ತಾನೆ. ಸುಷುಪ್ತಿಯಲ್ಲಿ ಉಂಟಾಗುವ ಸುಖವು ಹೇಗೆಂದರೆ :-

ಸ್ವಪ್ನಾವಸ್ಥೆಯಲ್ಲಿದ್ದ ಜೀವನು ಯಾವಾಗ ಭಗವಂತನ ವಿಶೇಷ ಸಂಬಂಧವನ್ನು ಪಡೆಯುತ್ತಾನೆಯೋ ಆವಾಗ, ಮನಸ್ಸೂ ಕೂಡ ಉಪರತವಾಗುತ್ತದೆ. ಮನೋಭಿಮಾನಿ ದೇವತೆಯೂ ತನ್ನ ವ್ಯಾಪಾರವನ್ನು ಮಾಡುವುದಿಲ್ಲ. ಭಗವಂತನ ಸುಖ ಜ್ಞಾನಗಳಂತೆ ವಿಲಕ್ಷಣವಾದ ಸುಖಜ್ಞಾನರೂಪನಾದ ಜೀವನದಲ್ಲಿ ಭಗವಂತನ ಸನ್ನಿಧಾನ ಸಾಮರ್ಥ್ಯದಿಂದ ಅಭಿವ್ಯಕ್ತವಾದ ಯತ್ಕಿಂಚಿತ್ ಸುಖವನ್ನು ಸಾಕ್ಷಿರೂಪ ಇಂದ್ರಿಯದಿಂದ ಜೀವನು ಅನುಭವಿಸುತ್ತಾನೆ.

**ವಿಶೇಷ ವಿಷಯ :** ಸ್ವಪ್ನದಲ್ಲಿ ನೋಡತಕ್ಕ ಮತ್ತು ಅನುಭವಿಸತಕ್ಕ ವಿಷಯಗಳೆಲ್ಲವೂ ಸತ್ಯಭೂತವಾದವು. ಹಿಂದೆ ಅನುಭವಿಸಿರತಕ್ಕ (ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ) ವಿಷಯಗಳು ಸಂಸ್ಕಾರರೂಪದಿಂದ ಮನಸ್ಸಿನಲ್ಲಿರುತ್ತವೆ. ಈ ವಾಸನೆಯನ್ನೇ ಭಗವಂತನು ಉಪಾದಾನ ಕಾರಣವನ್ನಾಗಿ ಮಾಡಿಕೊಂಡು ವಾಸನಾಮಯವಾದ (ಜ್ಞಾನಾತ್ಮಕವಾದ) ವಸ್ತುಗಳನ್ನು ಸೃಷ್ಟಿ ಮಾಡಿ ತೋರಿಸುತ್ತಾನೆ. ಈ ಸ್ವಪ್ನ ಪದಾರ್ಥಗಳು ದೇಹದೊಳಗೆ ಇರುವ ಅಂತರ ಪದಾರ್ಥಗಳು. ಸ್ವಪ್ನ ನೋಡುತ್ತಿರುವ ವೇಳೆಯಲ್ಲಿ ಇವುಗಳನ್ನು ಜೀವನು ಬಾಹ್ಯಪದಾರ್ಥಗಳೇ ಎಂದು ತಿಳಿಯುತ್ತಾನೆ. (ತತ್ಸದೃಶವಾಗಿರು-ವುದರಿಂದ) ಹೀಗೆ ಅಂತರ ಪದಾರ್ಥವನ್ನು ಬಾಹ್ಯ ಪದಾರ್ಥವೆಂದು ತಿಳಿದುದರಿಂದ ಸ್ವಪ್ನವು ಭ್ರಮಾತ್ಮಕವೆಂದು ತಿಳಿಯಬೇಕೇ ವಿನಃ ಆ ಅವಸ್ಥೆಯಲ್ಲಿ ಕಂಡುಬಂದ ಯಾವುದೇ ಪದಾರ್ಥವು ಶುಕ್ತಿರಜತದಂತೆ ಮಿಥ್ಯಾಭೂತವೆಂದು ತಿಳಿಯಬಾರದು. ವಾಸನಾಮಯವಾದ ವಸ್ತುಗಳು ಸ್ವಪ್ನಪ್ರಪಂಚಕ್ಕೆ ಸಂಬಂಧಪಟ್ಟವುಗಳು, ಸ್ವಪ್ನ ಮುಗಿದ ಕೂಡಲೇ ಮತ್ತೇ ಉಪಾದಾನ ಕಾರಣ ರೂಪವಾದ ಸಂಸ್ಕಾರದಲ್ಲಿಯೇ ಲೀನವಾಗುತ್ತವೆ. ಅದೇ ಎಂದು ತಿಳಿದ ಭಾಗ ಮಾತ್ರ ಭ್ರಾಂತಿಯೆಂದು ತಿಳಿಯಬೇಕು. ಅಂತೂ ಸ್ವಪ್ನವೂ ಸತ್ಯವೇ.

ಸ ಯಥಾ ಸೌಮ್ಯ ವಯಾಂಸಿ ವಾಸೋ ವೃಕ್ಷಂ ಸಂಪ್ರತಿಷ್ಠಂತೇ । ಏವಂ ಹ ವೈ ತತ್ಸರ್ವಂ ಪರೇ ಆತ್ಮನಿ ಸಂಪ್ರತಿಷ್ಠತೇ । ಪೃಥಿವೀ ಚ ಪೃಥಿವೀ-ಮಾತ್ರಾ ಚಾಪಶ್ಚಾಪೋ ಮಾತ್ರಾ ಚ ತೇಜಶ್ಚ ತೇಜೋಮಾತ್ರಾ ಚ, ವಾಯುಶ್ಚ ವಾಯುಮಾತ್ರಾ ಚಾಕಾಶಶ್ಚಾಕಾಶಮಾತ್ರಾ ಚ । ಚಕ್ಷುಶ್ಚ ದ್ರಷ್ಟವ್ಯಂ ಚ, ಶ್ರೋತ್ರಂ ಚ ಶ್ರೋತವ್ಯಂ ಚ, ಘ್ರಾಣಂ ಚ ಘ್ರಾತವ್ಯಂ ಚ, ರಸನಂ ಚ ರಸಿಯಿತವ್ಯಂ ಚ, ತ್ವಕ್ಚ ಸ್ಪರ್ಶಯಿತವ್ಯಂ ಚ ವಾಕ್ ಚ ವಕ್ತವ್ಯಂ ಚ, ಹಸ್ತೌ ಚ ದಾತವ್ಯಂ ಚ, ಪಾದೌ ಚ ಗಂತವ್ಯಂ ಚ, ಪಾಯುಶ್ಚ ವಿಸರ್ಜಯಿತವ್ಯಂ ಚ, ಉಪಸ್ಥಶ್ಚಾನಂದಯಿತವ್ಯಂ ಚ, ಮನಶ್ಚ ಮಂತವ್ಯಂ ಚ, ಬುದ್ಧಿಶ್ಚ ಬೋದ್ಧವ್ಯಂ ಚಾಹಂಕಾರಶ್ಚಾಹಂಕರ್ತವ್ಯಂ ಚ, ಚಿತ್ತಂ ಚ ಚೇತಯಿತವ್ಯಂ ಚ, ತೇಜಶ್ಚ ವಿದ್ಯೋತಯಿತವ್ಯಂ ಚ, ಪ್ರಾಣಶ್ಚ ವಿಧಾರಯಿತವ್ಯಂ ಚ ॥ 5 ॥

ಕಸ್ಮಿನ್ ಸರ್ವೇ ಪ್ರತಿಷ್ಠಿತಾ ಭವಂತಿ ಇತಿ ಅಂತಿಮಪ್ರಶ್ನಪರಿಹಾರಃ ಸದೃಷ್ಟಾಂತ ಉಚ್ಯತೇ- ಸ ಯಥೇತ್ಯಾದಿ । ಸೋಮ್ಯ ಸೋಮಾರ್ಹ ಸ ದೃಷ್ಟಾಂತೋ ಯಥಾ ವಯಾಂಸಿ ಪಕ್ಷಿಣೋ ವಾಸೋ ಯತ್ರಾತ್ಮನಾಂ ತಂ ವೃಕ್ಷಂ ಸಂಪ್ರತಿಷ್ಠಂತೇ । ಅಭಿಗಚ್ಛಂತಿ ತಮಾಶ್ರಿತ್ಯ ತಿಷ್ಠಂತಿ ಚ । ಏವಂ ಖಲು ಏತತ್ ಸರ್ವಂ ಪೃಥಿವ್ಯಾದಿತತ್ವಜಾತಂ ಪರೇ ಆತ್ಮನಿ ವಿಷ್ಣೌ ಸಂಪ್ರತಿಷ್ಠತೇ । ತದಾಧಾರಮೇವ ವರ್ತಂತೇ ಇತಿ । ಅತ್ರ ಪೃಥಿವೀತ್ಯಾದಿನಾ ಪಂಚಮಹಾಭೂತಾನಿ ಉಚ್ಯಂತೆ । ಪೃಥಿವೀಮಾತ್ರಾ ಚ ಇತ್ಯಾದಿನಾ ಗಂಧಾದಿ ಪಂಚತನ್ಮಾತ್ರಾಃ । ಚಕ್ಷುಶ್ಚ ಇತ್ಯಾದಿನಾ ದಶೇಂದ್ರಿಯಾಣಿ । ದ್ರಷ್ಟವ್ಯಂ ಚ ಇತ್ಯಾದಿನಾ ರೂಪಾದಿ ತದ್ವಿಷಯಾಃ । ಮನ ಇತ್ಯಾದಿನಾ ಅಂತಃಕರಣಪಂಚಕಮ್ । ಮಂತವ್ಯಂ ಚ ಇತ್ಯಾದಿನಾ ತದ್ವಿಷಯಾಃ । ತೇಜಃಶಬ್ದೇನ ಚೇತನಾ ಗೃಹ್ಯತೇ । ಇತಿ ಸರ್ವಸ್ಯಾಪಿ ಸಂಗ್ರಹಃ । ಪ್ರಾಣೋ ಮುಖ್ಯಪ್ರಾಣೋ ಧಾರಕಃ ತೇನ ವಿಧಾರಯಿತವ್ಯಂ ಚ ಪೃಥಿವ್ಯಾದಿಕಂ ಸರ್ವಮ್ ॥ 5 ॥

**ಅವತಾರಿಕಾ :** ಗಾರ್ಗ್ಯನು ಮಾಡಿದ ಕೊನೆಯ ಪ್ರಶ್ನೆಯಾದ ಕಸ್ಮಿನ್ ಸರ್ವೇ ಸಂಪ್ರತಿಷ್ಠಿತಾ ಭವಂತಿ ದೃಷ್ಟಾಂತಸಹಿತ ಉತ್ತರವನ್ನು ಹೇಳುತ್ತಾರೆ. ಪ್ರಾಣರುದ್ರಾದಿ ದೇವತೆಗಳೆಲ್ಲರೂ ಅಸ್ವತಂತ್ರರು. ಪರಾಧೀನರೆಂದು ಹೇಳಿ ಆಯಿತು. ಅಂದ ಮೇಲೆ ಅವರು ಎಲ್ಲಿ ಪ್ರತಿಷ್ಠಿತರಾಗುತ್ತಾರೆ ಮತ್ತು ಎಲ್ಲಿ ಆಶ್ರಿತರಾಗಿರುತ್ತಾರೆಂದು ಹೇಳಿದರೆ ಹಾಗೇಕೆ ಆಗಬೇಕು ಎಂಬುದಕ್ಕೆ ಈಗ ಉತ್ತರ ಹೇಳುತ್ತಾರೆ.

**ಭಾವಾರ್ಥ :** ಹೇ ಸೋಮಪಾನಕ್ಕೆ ಅರ್ಹನಾದ ಗಾರ್ಗ್ಯನೇ ಕೇಳು. ನಿನ್ನೀ ಪ್ರಶ್ನೆಗೆ ದೃಷ್ಟಾಂತಸಹಿತವಾಗಿ ಉತ್ತರಿಸುತ್ತೇನೆ ಎಂದು ಪಿಪ್ಪಲಾದರು ಹೇಳುತ್ತಾರೆ. ಪಕ್ಷಿಗಳು ಸಂಜೆ ಆಗುತ್ತಿರಲು ತಮ್ಮ ತಮ್ಮ ಅವಾಸಸ್ಥಾನವಾದ ಒಂದು

ವೃಕ್ಷವನ್ನು ಕುರಿತು ಆಶ್ರಯ ಹೊಂದುತ್ತವೆ. ಅದೇ ರೀತಿ ಪೃಥಿವ್ಯಾದಿ ತತ್ವಗಳ ಗುಂಪು ಶ್ರೀ ವಿಷ್ಣುವಿನಲ್ಲಿ ಆಶ್ರಿತವಾಗುತ್ತವೆ. ಇಲ್ಲಿ ಪೃಥಿವ್ಯಾದಿ ತತ್ವಗಳು ಎಂದರೆ ವಿವರಣೆ ಕೊಡುತ್ತಾರೆ - (1) ಪೃಥಿವೀ ಇತ್ಯಾದಿ ಪಂಚಭೂತಗಳು - ಪೃಥಿವೀ, ಅಪ್, ಅಗ್ನಿ, ಆಕಾಶ, ವಾಯುಗಳು..... ಅದರ ತನ್ಮಾತೃಗಳು ಐದು. ಚಕ್ಷುಪದದಿಂದ ಐದು ಜ್ಞಾನೇಂದ್ರಿಯಗಳು - ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ತತ್ ತನ್ಮಾತ್ರಗಳು - ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಪಂಚ ಕರ್ಮೇಂದ್ರಿಯಗಳಾದ ವಾಗ್ ಪಾಣಿಪಾದ ಪಾಯು ಉಪಸ್ಥಾ- ಅವರ ಕಾರ್ಯಗಳಾದ - ದಾನ, ಅದಾನ, ಗಮನಾಗಮನ, ರೇತೋತ್ಸರ್ಜನ - ಆನಂದಪಡುವುದು - ಮನಸ್ಸು, ಬುದ್ಧಿ- ಅವುಗಳ ವಿಷಯ - ಅಹಂಕಾರ, ಚಿತ್ತ, ಅಂತಃಕರಣ ಹೀಗೆ ಅಂತಃಕರಣ ಪಂಚಕವಾಯಿತು.

ಮನಸ್ಸು, ಸಂಕಲ್ಪ, ವಿಕಲ್ಪ (ಮಾಡುತ್ತೇನೆ ಅಥವಾ ಮಾಡುವುದಿಲ್ಲ)ವೆಂಬ ಸಂಕಲ್ಪ - ಬುದ್ಧಿ ನಿಶ್ಚಯವಾಗಿ ತಿಳಿಸುತ್ತದೆ. ಅಹಂಕಾರ - ಸ್ವರೂಪತ್ವಂ ಅಸ್ವರೂಪಬುದ್ಧಿಃ । ಚಿತ್ತ - ಸ್ಥಿರವಾಗದೇ ಇರುವ ಸ್ಮರಣೆ, ಚೇತನ - ಅನೇಕ ವಿಷಯ ಚಿತ್ತವು ಹರಿದುಬಿಡುವುದು - ತೇಜಸ್ ಶಬ್ದದಿಂದ ಚೇತನವೆಂದು ಹೇಳಿರುತ್ತಾರೆ.

ವಿದ್ಯೋಯಿತವ್ಯಂ ಚ ಎಂಬ ಟೀಕಾವ್ಯಾಖ್ಯಾನುಸಾರಿ ಚೇತನವೆಂದು ತಿಳಿಯಬೇಕು. ಹೀಗೆ ಎಲ್ಲಾ ಸೇರಿಸಿದರೆ 25 ತತ್ವಗಳಾಗುತ್ತವೆ. ಪಾಯು ಉಪಸ್ಥಗಳನ್ನು ಒಂದೇ ತತ್ವವೆಂದು ಎಣಿಸಿದಾಗ 24 ತತ್ವಗಳಾಗುವುದು.

ಈ ಎಲ್ಲಾ ತತ್ವಗಳು ಮುಖ್ಯಪ್ರಾಣನಿಂದ ಧಾರಕತ್ವವು ಪರಮಾತ್ಮನ ಮುಖೇನ ಮುಖ್ಯಪ್ರಾಣನೇ ನಿಯಾಮಕನೆಂದು ಹೇಳಿದಂತಾಯಿತು. ಮುಖ್ಯವಾಗಿ ತಿಳಿಯುವುದೇನೆಂದರೆ ಎಲ್ಲಾ ತತ್ವಗಳು ಮುಖ್ಯಪ್ರಾಣನೂ ಪರಮಾತ್ಮನನ್ನು ಆಶ್ರಯಿಸಿಕೊಂಡಿರುತ್ತಾರೆಂದು ತಾತ್ಪರ್ಯ

**ಅವತಾರಿಕಾ :** ಈವರೆಗೂ ತಿಳಿಸಿದ ತತ್ವಗಳು - ಮುಖ್ಯಪ್ರಾಣನ ದ್ವಾರಾ ಭಗವಂತನಿಂದ ನಿಯಮ್ಯಾ ಎಂದಾಯಿತು. ಅದನ್ನು ತಿಳಿಯುವ ರೀತಿಯನ್ನು ತಿಳಿಸುತ್ತಾರೆ- ಏಷಹಿ ದ್ರಷ್ಟಾ ಎಂಬ ಮಂತ್ರದಿಂದ.

**ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ । ಸಃ ಯಃ ಹ ವೈ ತದಚ್ಛಾಯಮಶ-ರೀರಮಲೋಹಿತಂ ಶುಭ್ರಮಕ್ಷರಂ ವೇದಯತೇ ಯಸ್ತು ಸೋಮ್ಯ ಸಃ ಸರ್ವಜ್ಞಃ ಸರ್ವಂ ಭವತಿ । ತದೇಷ ಶ್ಲೋಕಃ । ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ । ತತ್ ಏತತ್ ಅಕ್ಷರಂ ವೇದಯತೇ ಯಸ್ತು ಸೋಮ್ಯ ಸ ಸರ್ವಜ್ಞಃ ಸರ್ವಮೇವ ಆವಿವೇಶೇತಿ ॥ 6 ॥**

*॥ ಇತಿ ಚತುರ್ಥಃ ಪ್ರಶ್ನಃ ॥*

**ಕಥಂ ಸರ್ವಸ್ಯ ಪರಾತ್ಮಶಬ್ದಿತ ವಿಷ್ಣ್ವಧೀನತ್ವಮಿತ್ಯತ ಉಚ್ಯತೇ -ಏಷ ಹೀತಿ । ಚಕ್ಷುರಾದೀನಾ-ಮೇತೇಷಾಮೇಷ ಹಿ ದರ್ಶನಾದಿಶಕ್ತಿಪ್ರದಃ । ಸ್ವಯಂ ಚ ವಿಜ್ಞಾನಾತ್ಮಾ ವಿಜ್ಞಾನಸ್ವರೂಪಃ ಸರ್ವಜ್ಞೇತಿ**

ಯಾವತ್ । ಪುರುಷಃ ಪೂರ್ಣತ್ವಾದತಶ್ಚೋಪಪನ್ನಂ ತಸ್ಯ ಸರ್ವಾಶ್ರಯತ್ವಮಿತಿ । ತಸ್ಯ ವಿಜ್ಞಾನಾತ್ಮನೋ ವೇದನಸ್ಯ ಫಲಮುಚ್ಯತೇ- ಸ ಯ ಇತಿ । ಸ ವಿಜ್ಞಾನಾತ್ಮಾ ಪುರುಷೋ ಯೋ ಯಾದೃಶಲಕ್ಷಣಃ ಏತಮೇವಂವಿಧಂ ಅಚ್ಛಾಯಮವಿದ್ಯಾರಹಿತಮ್ । ಅತ ಏವಾಶರೀರಂ ತಸ್ಮಾದೇವಾಲೋಹಿತಂ ಲೋಹಿತತ್ವಾದಿರೂಪರಹಿತಂ ಶುಭ್ರಂ ಶುದ್ಧಂ ಪ್ರಾಕೃತರೂಪಾದ್ಯಭಾವೇಽಪಿ ಅಪ್ರಾಕೃತಶುಭ್ರಾದಿ-ರೂಪಯುಕ್ತಂ ವಾ ॥ ಅತ ಏವಾಕ್ಷರಮ್ । ಹೇ ಸೋಮ್ಯ, ಯೋ ವೇದಯತೇ ವಿಜಾನಾತಿ ಸ ಸರ್ವಜ್ಞಃ ಸರ್ವಪ್ರಧಾನಸ್ಯ ಸರ್ವಕಾರಣಸ್ಯ ಚ ಪರಿಜ್ಞಾನಾತ್ । ಸರ್ವಜ್ಞ ಇವ ತತ್ಸದೃಶತ್ವಾತ್ ಸರ್ವಸ್ಯ ಸರ್ವಜ್ಞ ಏವ ವಾ ಸರ್ವಸ್ಯಾಪಿ ಕರ್ಮಾದೇಃ । ಜ್ಞಾನಸ್ಯ ಫಲಂ ಪರಮಾತ್ಮಜ್ಞಾನಂ ಪ್ರಾಪ್ತಮನೇನೇತಿ ವಾ । ಜ್ಞಾನೀ ಸ್ತೂಯತೇ । ಸರ್ವಂ ಭವತಿ ಸರ್ವಂ ಪರಿಪೂರ್ಣಂ ಪರಂ ಬ್ರಹ್ಮ ತದ್ಭವತಿ ತದ್ಭೂತ ಇವ । ತತ್ಪ್ರವಿಶತೀತಿ ಯಾವತ್ । ತದೇಷ ಶ್ಲೋಕಃ । ವಿಜ್ಞಾನಾತ್ಮಾ ವಿಜ್ಞಾನಸ್ವರೂಪೋ ಜೀವಃ । ಶರೀರೇ ಸುಖಂ ಭವತೀತಿ ಹ್ಯುಕ್ತಮ್ । ಪ್ರಾಣಾಶ್ಚಕ್ಷುರಾದಯಃ ತದ್ವಿಷಯಾಶ್ಚ ರೂಪಾದಯಃ ಭೂತಾನಿ ಪೃಥಿವ್ಯಾದೀನಿ ತನ್ಮಾತ್ರಾಶ್ಚ ಸರ್ವೈರ್ದೇವೈರಭಿಮಾನಿಭಿಃ ಸೂರ್ಯಾದ್ಯೈಃ ಸಹೈವ ಯತ್ರ ಯಸ್ಮಿನ್ನಕ್ಷರೇ ಬ್ರಹ್ಮಣಿ ಸಂಪ್ರತಿಷ್ಠಂತೇ । ತದೇವ ತದಕ್ಷರಂ ವೇದಯತೇ ವಿಜಾನಾತಿ ಯಃ ಪುರುಷಃ ಸೋಮ್ಯೇತಿ ಕಸ್ಯಚಿತ್ಸಂಬುದ್ಧಿಃ । ಸ ಉಕ್ತ-ಪ್ರಕಾರೇಣ ಸರ್ವಜ್ಞಃ ಸರ್ವಂ ಪರಂ ಬ್ರಹ್ಮ ಆವಿವೇಶೈವಾವಿಷ್ಟ ಏವ ಧ್ರುವಂ ಅವಿಶತ್ಯೇವ ಇತಿ ॥ 6 ॥

*॥ ಇತಿ ಚತುರ್ಥಪ್ರಶ್ನಪ್ರತಿವಚನಮ್ ॥*

ಸಕಲೇಂದ್ರಿಯಗಳಿಗೂ, ತತ್ತತ್ ಶಕ್ತಿಪ್ರದನು ಭಗವಂತನೇ ಆಗಿದ್ದಾನೆ. ವಿಜ್ಞಾನಾತ್ಮನಾದ ಜೀವನು ಸುಷುಪ್ತಿಯಲ್ಲಿ ಸಕಲ ತತ್ವಾಭಿಮಾನಿಗಳ ಸಹಿತವಾಗಿ ಭಗವಂತನನ್ನು ಪ್ರವೇಶಿಸುತ್ತಾನೆ. ಆದ್ದರಿಂದಲೇ ಅವನಿಗೆ ತನ್ನ ಸ್ವರೂಪ ಸುಖದ ಅಭಿವ್ಯಕ್ತಿಯಾಗುತ್ತದೆ. ಹೀಗೆ ಯಾರು ಪರಮಾತ್ಮನ ಮಹಿಮೆಯನ್ನು ತಿಳಿಯುತ್ತಾನೆಯೋ, ಆ ಅಧಿಕಾರಿ ಜೀವನು ಸರ್ವಜ್ಞನಂತೇ ಸರಿ – (ಏಕೆಂದರೆ ಸರ್ವಪ್ರಧಾನನೂ ಸರ್ವಜ್ಞನೂ ಆದ ಪರಬ್ರಹ್ಮನನ್ನು ಅರಿತಿರುವುದರಿಂದ), ಆ ಭಗವಂತನು ಅವಿದ್ಯಾರಹಿತನು ಪ್ರಾಕೃತ ಶರೀರ ರಹಿತನು, ಆದರೆ ಅಪ್ರಾಕೃತವಾದ, ಶುದ್ಧವಾದ ವಿಕಾರವಿಲ್ಲದ ದೇಹ ರೂಪಾದಿಗಳನ್ನು ಹೊಂದಿರುತ್ತಾನೆ. ಆದುದರಿಂದಲೇ ಅವನು ನಾಶ ರಹಿತನು, ಅಕ್ಷರನು, ಇವನೇ ಸಕಲೇಂದ್ರಿಯಗಳಿಗೂ ಶಕ್ತಿಪ್ರದನು. ಹೀಗೆ ತಿಳಿದುಕೊಂಡವನು ಪರಮಾತ್ಮನನ್ನೇ ಹೊಂದುತ್ತಾನೆ. ಇದಕ್ಕೆ ಸಂಶಯವಿಲ್ಲವೆಂದು ಸಾಕ್ಷಿರೂಪವಾಗಿ ಮತ್ತೊಂದು ಶೃತಿಯನ್ನು ವೇದಪುರುಷನು ಹೇಳುತ್ತಾನೆ.

**ವಿಶೇಷ ವಿಷಯ :**

1) ವಿಜ್ಞಾನಾತ್ಮಾ ಎಂದರೆ ಜೀವವೆಂದರ್ಥವು. ಹೇಗೆಂದರೆ :- ಇಲ್ಲಿ ವಿ ಎಂದಿರುವುದರಿಂದ ನಿತ್ಯೋತ್ತಮತ್ವರೂಪ ವಿಶಿಷ್ಟತ್ವವೆಂದೂ ಆತ್ಮಾ ಶಬ್ದದಿಂದ ಸ್ವರೂಪ, ದೇಹ ಜೀವನನ್ನು ತೆಗೆದುಕೊಳ್ಳಬೇಕು. ಜ್ಞಾನ ಶಬ್ದ ಉಪಲಕ್ಷಣವಾಗಿ ಆನಂದವನ್ನೂ ಇಟ್ಟುಕೊಳ್ಳಬೇಕು. ವಿ = ಸರ್ವದಾ ಸಿದ್ಧವಾದ ದುಃಖಾಸಂಭಿನ್ನವಾದ ಜ್ಞಾನಾನಂದಾದಿಗಳು, ಆತ್ಮಾ = ದೇಹವು ಯಾರಿಗೋ ಅವನು, ವಿಜ್ಞಾನಾತ್ಮಾ = ಜೀವನು. ಹಿಂದೆ ಶರೀರೇ ಸುಖಂ ಭವತಿ ಎಂಬ ಕಡೆಯಲ್ಲಿ ಶರೀರ ಶಬ್ದಕ್ಕೆ ಜೀವವೆಂದು ಅರ್ಥ ಹೇಳಿದೆ. ಆ ಸುಪ್ತ ಜೀವನದಲ್ಲಿ ಸ್ವರೂಪ ಸುಖದ ಅಭಿವ್ಯಕ್ತಿಯಾಗುವುದು. ಹೇಗೆಂದರೆ ಜೀವನು ವಿಜ್ಞಾನಾತ್ಮನಾಗಿರುವುದರಿಂದ ಎಂದು ಇಲ್ಲಿ ವಿವರಿಸಲ್ಪಟ್ಟಿದೆ (ಇದೆ ಮಾಂಕಾಲೀ ಟಿಪ್ಪಣಿ)

2) ಅಶರೀರಂ ಅಲೋಹಿತಂ ಇತ್ಯಾದಿಗಳಿಂದ ಶರೀರ ರಾಹಿತ್ಯರೂಪರಾಹಿತ್ಯವೆಂದು ತಿಳಿಯಬಾರದು. ಸಹಸ್ರಶೀರ್ಷಾ ಪುರುಷ ರುಕ್ಮವರ್ಣಂ ಇತ್ಯಾದಿ ಶ್ರುತಿಗಳಿಗನುಸಾರವಾಗಿ ಭಗವಂತನಿಗೆ ದೇಹವುಂಟು ರೂಪಾದಿಗಳೂ ಉಂಟು; ಆದರೆ ಅವುಗಳ ನಾಶರಹಿತನಾದ (ಅಕ್ಷರ) ಅಪ್ರಾಕೃತದೇಹ ರೂಪಾದಿಗಳು; ಪ್ರಾಕೃತದೇಹವಲ್ಲವೆಂದು ತಿಳಿಯಬೇಕು. ॥ 6 ॥

*॥ ಇತಿ ಚತುರ್ಥ ಪ್ರಶ್ನೆಯು ॥*

★ ★ ★

## ॥ ಅಥ ಪಂಚಮಃ ಪ್ರಶ್ನಃ ॥

**ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ । ಸ ಯೋ ಹ ವೈ ತತ್ ಭಗವನ್ಮನುಷ್ಯೇಷು ಪ್ರಾಯಣಾಂತಮೋಂಕಾರಂ ಅಭಿಧ್ಯಾಯೀತ । ಕತಮಂ ವಾವ ಸ ತೇನ ಲೋಕಂ ಜಯತೀತಿ । ತಸ್ಮೈ ಸ ಹೋವಾಚ । ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ವಿದ್ವಾನೇತೇನೈವಾಯನೇನೈಕತರಮನ್ವೇತಿ ॥ 1 ॥**

**ಅಥ ಹೈನಂ ಶೈಬ್ಯಃ । ಏವಮುಕ್ತಲಕ್ಷಣಂ ಪರಂ ಬ್ರಹ್ಮ ಯೇನ ಮಂತ್ರೇಣೋಪಾಸಿತವ್ಯಮ್ । ಉಪಾಸಿತಂ ಚ ಯತ್ಫಲಂ ಪ್ರಯಚ್ಛತಿ । ತದಿದಾನೀಂ ವಕ್ತುಮ್ ಅಯಮುತ್ತರೋ ಗ್ರಂಥಃ । ಭಗವನ್ನೇತದ್ದೇಹೇಷು ಮನುಷ್ಯೇಷು ಸ ಯೋ ಯಃಕಶ್ಚಿತ್ಪ್ರಾಯಣಾಂತಂ ಪ್ರಯಾಣಪರ್ಯಂತಂ ಯಾವಚ್ಛರೀರಾದುತ್ಕ್ರಮಣಂ ತಾವದಿತಿ ಯಾವತ್ । ಓಂಕಾರಂ ಓಮಿತ್ಯಾಕ್ರಿಯಮಾಣಂ ಪರಮಾತ್ಮಾನಮ್ ಅಭಿಧ್ಯಾಯೀತ ಸರ್ವದಾ ಚಿಂತಯೇತ್, ಓಮಿತ್ಯನೇನ ಮಂತ್ರೇಣ ಇತ್ಯಭಿಪ್ರಾಯಃ । ಸ ಪುರುಷಃ ತೇನ ಕತಮಂ ಲೋಕಂ ಜಯತಿ ಪ್ರಾಪ್ನೋತೀತಿ ಪೃಷ್ಟವತೇ ತಸ್ಮೈ ಸ ಹೋವಾಚ । ಯದೋಂಕಾರಃ ಓಮಿತ್ಯಾಕ್ರಿಯಮಾಣಂ ವಸ್ತು । ತದೇತತ್ಪರಂ ಚಾಪರಂ ಚ ಬ್ರಹ್ಮ । ಯಸ್ಮಾತ್ಪ್ರಣವೋ ಮುಖ್ಯತಃ ಪರಮಾತ್ಮಪ್ರತಿಪಾದಕಃ, ತತ್ಪ್ರತಿಮತ್ವೇನಾಮುಖ್ಯತಃ ವಿರಿಂಚಪ್ರತಿಪಾದಕಶ್ಚ । ತಸ್ಮಾದ್ವಿದ್ವಾನ್ ಪ್ರಣವೇನೋಪಾಸಕ ಏತೇನೈವೋಪಾಸನಾಖ್ಯೇನಾಯನೇನ ಗಮನಸಾಧನೇನ ಪರಾಪರಬ್ರಹ್ಮಣೋಃ ಏಕತರಮನ್ವೇತಿ ಪ್ರಾಪ್ನೋತಿ ॥ 1 ॥**

**ಭಾವಾರ್ಥ :** ಹಿಂದೆ ತಿಳಿಸಿದ ಪರಬ್ರಹ್ಮನನ್ನು ಯಾವ ಮಂತ್ರದಿಂದ ಉಪಾಸನೆ ಮಾಡಬೇಕು? ಉಪಾಸನೆಯಿಂದ ಏನು ಫಲವನ್ನು ಪಡೆಯುತ್ತಾನೆ ಎಂಬುದನ್ನು ಈಗ ಹೇಳುತ್ತಾರೆ; ಸತ್ಯಕಾಮರು ಪಿಪ್ಪಲಾದರನ್ನು ಕೇಳಿದರು. ಏನೆಂದರೆ – ಪೂಜ್ಯರೇ, ಓಂಕಾರ ಪ್ರತಿಪಾದ್ಯನಾದ ಪರಮಾತ್ಮನನ್ನು ಓಂ ಎಂಬ ಮಂತ್ರದಿಂದ ಈ ಶರೀರ ಉತ್ಕ್ರಮಣವಾಗುವವರೆಗೂ ಧ್ಯಾನಿಸುವ ಪುರುಷನಿಗೆ ಯಾವ ಲೋಕವು ಸಿದ್ಧಿಸುತ್ತದೆ ? ಪಿಪ್ಪಲಾದರು ಹೇಳಿದರು :– ಸತ್ಯಕಾಮನೇ ಕೇಳು, ನೀನು

ಕೇಳಿದ ಓಂಕಾರವು ಮುಖ್ಯವಾಗಿ ಪರಬ್ರಹ್ಮನ ವಾಚಕವೂ, ಅಮುಖ್ಯವಾಗಿ ಪರಮಾತ್ಮನ ಪ್ರತಿಮಾರೂಪವಾಗಿರುವ ವಿರಿಂಚಿ ವಾಚಕವೂ ಆಗಿದೆ. ಈ ಕಾರಣದಿಂದಲೇ ಪ್ರಣವೋಪಾಸಕನು ಪರಬ್ರಹ್ಮನನ್ನೋ ಅಥವಾ ಅಪರ ಬ್ರಹ್ಮನನ್ನೋ ಹೊಂದುತ್ತಾನೆ. (ಅಪರ ಬ್ರಹ್ಮನನ್ನು ಹೊಂದಿದವನು ತದನಂತರದಲ್ಲಿ ಪರಬ್ರಹ್ಮನನ್ನು ಹೊಂದುತ್ತಾನೆ)

**ವಿಶೇಷ ವಿಷಯ :** ಪರಂ ಎಂದರೆ ವೈಕುಂಠಾದಿಸ್ಥಿತನಾದ ಅನ್ಯಾಧಿಷ್ಠಿತನಾದ ಬ್ರಹ್ಮ; ಅಪರಂ ಎಂದರೆ ಚತುರ್ಮುಖ ಬ್ರಹ್ಮನೆಂಬ ಪ್ರತಿಮಾಂತರ್ಗತನಾದ ಬ್ರಹ್ಮನು. ಆದ್ದರಿಂದಲೇ ಟೀಕಾಕೃತ್ಪಾದರು ಅಮುಖ್ಯತೋ ವಿರಿಂಚ ಪ್ರತಿಪಾದಕಃ ಎಂದಿದ್ದಾರೆ. ಹೇಗೆಂದರೆ ಗಂಗಾಯಾಂ ಘೋಷಃ ಎಂಬಲ್ಲಿ ಗಂಗಾ ಪದಕ್ಕೆ ಗಂಗಾ ಸಂಬಂಧಿಯಾದ ತೀರವೆಂದು ಹೇಗೆ ಅಮುಖ್ಯಾರ್ಥ ಪ್ರಯೋಗವುಂಟೋ, ಹಾಗೆಯೇ ಬ್ರಹ್ಮಾಂತರ್ಗತ ವಿಷ್ಣುವಾಚಕವಾದ ಪ್ರಣವ ಮಂತ್ರದ ಸನ್ನಿಧಾನದಿಂದ ಲಕ್ಷಣತಾ ವಿರಿಂಚಿಯೆಂದು ಪ್ರಯೋಗವು.

ಓಂಕಾರದಿಂದ ಶ್ರೀ ಹರಿಯೇ ಮುಖ್ಯಪ್ರತಿಪಾದ್ಯನು :-

1) ಅಹಮೇವಾಖಿಲ ಗುಣೋ ವಾಚಕಃ ಪ್ರಣವೋ ಮಮ

2) ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರ – ಗೀತಾ.

ನಾರಾಯಣಾದಿ ನಾಮದಂತೆಯೇ ಓಂ ಎಂಬುದೂ ವಿಷ್ಣುವಿನ ಸಾಧಾರಣ ನಾಮವು. ॥ 1 ॥

**ಸ ಯದ್ಯೇಕಮಾತ್ರಮಭಿಧ್ಯಾಯೀತ ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿಸಂಪದ್ಯತೇ । ತಮೃಚೋ ಮನುಷ್ಯಲೋಕಮುಪನಯಂತೆ । ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ । ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽಂತರಿಕ್ಷಂ ಯಜುರ್ಭಿರುನ್ನೀಯತೇ ಸೋಮಲೋಕಂ ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ । ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯಿತ ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೆ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೆ ಬ್ರಹ್ಮಲೋಕಮ್ । ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರಷಮೀಕ್ಷತೇ ॥ 2 ॥**

ಕಿಂ ಪ್ರಣವೋಪಾಸನಮಾತ್ರೇಣೈಕತರಮನ್ವೇತಿ ? ನ, ಕಿಂತು ಯಥಾವಜ್ಜ್ಞಾತ್ವೋಪಾಸನೇನೈವೇತ್ಯುಚ್ಯತೆ- ಸ ಇತ್ಯಾದಿ । ಅಕಾರೋಕಾರಮಕಾರಾಖ್ಯಾಂಶತ್ರಯಯುಕ್ತೋ ಹಿ ಪ್ರಣವಃ ಸ ಉಪಾಸಕೋ ಯದ್ಯೇಕಮಾತ್ರಾ ವಾಚಿಕಾ ಯಸ್ಯ ಸಮ್ಯಗ್ವಿದಿತ್ವಾ ಇತರೆ (ಮಾತ್ರೆಅ) ಅವಿಜ್ಞಾಯೇತಿ ಯಾವತ್ । ತರ್ಹಿ

ಸ ಉಪಾಸಕಃ ತೇನೈವ ಧ್ಯಾನೇನ ಪರಮಾತ್ಮನಾ ಸಂವೇದಿತಃ ಏಹೀತಿ ಸಂಬೋಧಿತ ಇವ ದೇಹ-ಪಾತಾನಂತರಂ ಕ್ಷಿಪ್ರಮೇವ ಜಗತ್ಯಾಂ ಪೃಥಿವ್ಯಾಂ ಅಭಿಸಂಪದ್ಯತೇ ಪ್ರಾಪ್ನೋತಿ ಜನ್ಮೇತಿ ಶೇಷಃ । ಕಥಂ ಕೀದೃಶೇ ಜನ್ಮೇತಿ ತಮುಪಾಸಕಂ ಋಚಃ ಋಗ್ವೇದಾಭಿಮಾನಿನ್ಯೋ ದೇವತಾಃ ಪೃಥಿವ್ಯಾಂ ಮನುಷ್ಯ-ಲೋಕಂ ಮನುಷ್ಯಶರೀರಂ ದ್ವಿಜಾಗ್ರ್ಯಲಕ್ಷಣಂ ಉಪನಯಂತೇ ಪ್ರಾಪಯಂತಿ । ಸ ಚ ತತ್ರ ಜನ್ಮನಿ ತಪ ಆದಿ ಸಂಪನ್ನಃ ತತ್ಫಲರೂಪಮಹಿಮಾನಮನುಭವತಿ । ಅಥ ಯದಿ ದ್ವಿಮಾತ್ರೇಣ ದ್ವೇ ಮಾತ್ರೇ ವಾಚಿಕೇ ಯಸ್ಯ ತೇನ ಪರಮಾತ್ಮನಾ ಮನಸಿ ಸಂಪದ್ಯತೇ ಸಂಗತೋ ಭವತಿ । ತಿಸೃಷು ಪ್ರಣವಮಾತ್ರಾಸು ದ್ವೇ ಮಾತ್ರೇ ಸಮ್ಯಗ್ ಜ್ಞಾತ್ವಾ ಅನ್ಯಾಮವಿಜ್ಞಾಯ ಪರಮಾತ್ಮಾನಂ ಚಿಂತಯತೀತಿ ಯಾವತ್ । ತರ್ಹಿ ಸ ಉಪಾಸಕಃ ಯಜುರ್ಭಿಃ ಯಜುರ್ವೇದಾಭೀಮಾನಿದೇವತಾಭಿಃ ಅಂತರಿಕ್ಷಂ ಅಂತರಿಕ್ಷಸ್ಥಂ ಸೋಮ-ಲೋಕಂ ಉನ್ನೀಯತೇ । ಉನ್ನೀತಶ್ಚ ತತ್ರ ಸೋಮಲೋಕೇ ವಿಭೂತಿಮೈಶ್ವರ್ಯಂ ಅನುಭೂಯ ಪುನರಾವರ್ತತೇ । ತತಶ್ಚ್ಯವತೇ ಯತ ಏವಂ ತಸ್ಮಾದ್ಯಸ್ತು ಪುರುಷಃ ಏತಂ ಪರಂ ಪರುಷಂ ತ್ರಿಮಾತ್ರೇಣ ತಿಸ್ರೋ ಮಾತ್ರಾ ಅಪಿ ಸಮ್ಯಗ್ವಿದಿತ್ವಾ ಇತಿ ಯಾವತ್ । ಓಮಿತ್ಯನೇನೈವಾಕ್ಷರೇಣಾಭಿಧ್ಯಾಯೀತ ಸ ಧ್ಯಾತಾ ಪರಮೇಶ್ವರಮಪರೋಕ್ಷೀಕೃತ್ಯ ತೇಜೋರೂಪೇ ಸೂರ್ಯೇ ಸಂಪನ್ನಃ । ತಂ ಪ್ರಾಪ್ನೋತಿ । ಸೂರ್ಯಂ ಪ್ರಾಪ್ಯ ಚಾಸೌ ಯಥಾ ಪಾದೋದರಃ ಸರ್ಪಃ ತ್ವಚಾ ಜೀರ್ಣಯಾ ವಿನಿರ್ಮುಚ್ಯತೇ । ಏವಂ ಖಲು ಸ ಧ್ಯಾನೀ ಪಾಪ್ಮನಾ ಪ್ರಾರಬ್ಧೇನ ವಿನಿರ್ಮುಕ್ತೋ ಭವತಿ । ವಿಧೂತಪಾಪಶ್ಚ ಸ ಸಾಮಭಿಃ ಸಾಮವೇದಾಭಿಮಾನಿದೇವತಾಭಿಃ ಬ್ರಹ್ಮಲೋಕಂ ಸತ್ಯಾಖ್ಯಂ ಉನ್ನೀಯತೇ । ತತ್ರ ಚ ಏತಸ್ಮಾತ್ ಸತ್ಯಲೋಕಾಧಿಪತೇರ್ಜೀವಘನಾತ್ ಜೀವಸಾರಾತ್ ಸಕಲಜೀವೋತ್ತಮಾದ್ವಿರಿಂಚಾತ್ ತದುಪ-ದೇಶೇನೇತಿ ಯಾವತ್ । ಪರಾತ್ಪರಂ ಉತ್ತಮೋತ್ತಮಂ ಸಕಲಶರೀರೇಷು ಶಯಿತಂ ಪುರುಷಂ ಪೂರ್ಣಂ ವಾಸುದೇವಂ ಈಕ್ಷತೇ । ಪುನರಭಿವೃದ್ಧಜ್ಞಾನೋ ಭವತೀತಿ । ಅತ್ರ ಪುರುಷಮೀಕ್ಷಿತ್ವಾ ಚ ತಂ ಪ್ರಾಪ್ನೋ-ತೀತ್ಯಪಿ ಗ್ರಾಹ್ಯಮ್ । ಯಥೋಕ್ತಂ ಭಾಷ್ಯೇ ॥ 2 ॥

ಭಾವಾನುವಾದ : ಪ್ರಣವೋಪಾಸಕನಿಂದ ಮಾತ್ರ ಪರ ಮತ್ತು ಅಪರಬ್ರಹ್ಮ ಪ್ರಾಪ್ತೀ ಅಥವಾ ಬೇರೆಯವರಿಗೂ ಉಂಟೇ? - ಎಂದರೆ ಹೇಳುತ್ತಾರೆ :-

ಓಂಕಾರದ ಅವಯವಗಳಾದ ಆಕಾರ, ಉಕಾರ, ಮಕಾರ ಮಾತ್ರೆಗಳೂ ಪರಮಾತ್ಮ ವಾಚಕಗಳೇ ಆಗಿವೆ; ಅವು-ಗಳಲ್ಲಿ ಒಂದು ಮಾತ್ರೆಯಿಂದ ಪ್ರತಿಪಾದ್ಯನಾದ ಭಗವಂತನನ್ನು ಸರಿಯಾಗಿ ತಿಳಿದುಕೊಂಡು, ಧ್ಯಾನಮಾಡಿದವನು ಮರಣಾನಂತರದಲ್ಲಿ ಬಹಳ ಶೀಘ್ರವಾಗಿ ಈ ಭೂಲೋಕದಲ್ಲಿ ಶ್ರೇಷ್ಠವಾದ ಬ್ರಾಹ್ಮಣ ವರ್ಗದಲ್ಲಿ ಜನ್ಮ ಪಡೆಯುತ್ತಾನೆ. ಇವರಿಗೆ ವಿಶೇಷ ಫಲವೆಂದರೆ - ಇಂತಹವನನ್ನು ಋಗಭಿಮಾನಿ ದೇವತೆಗಳು ದ್ವಿಜಶ್ರೇಷ್ಠರ ವಂಶದಲ್ಲಿ ಜನ್ಮ ಕೊಟ್ಟು ಅಲ್ಲಿ ವಿಶೇಷವಾಗಿ ಸಾಧನೆಮಾಡಿಕೊಳ್ಳಲು ಅನುಕೂಲ ಮಾಡಿಕೊಡುತ್ತಾರೆ. ಆ ಮನುಷ್ಯನು ನಿತ್ಯನೈಮಿತ್ತಿಕ ವ್ರತಗಳಿಂದಲೂ ಶಾಸ್ತ್ರಾಭ್ಯಾಸದಿಂದಲೂ, ಬ್ರಹ್ಮಚರ್ಯ, ಅಸ್ತಿಕ್ಯ ಬುದ್ಧಿಯಿಂದಲೂ, ಲೋಕದಲ್ಲಿ ಪೂಜ್ಯನಾಗುತ್ತಾನೆ.

ಅನಂತರದಲ್ಲಿ ಪುರುಷನಾದವನು ಪ್ರಣವ ಮಂತ್ರಗಳಲ್ಲಿ ಎರಡು ಮಂತ್ರಗಳನ್ನು ಅರ್ಥಸಹಿತ ಓಂಕಾರ-ಪ್ರತಿಪಾದ್ಯನಾದ ಶ್ರೀಹರಿಯನ್ನು ಉಪಾಸನೆ ಮಾಡುತ್ತಾನೋ ತತ್ಕಾಲದಲ್ಲಿ ಭಗವಂತನ ವತಿಯಿಂದ ಮನಸ್ಸಿನಲ್ಲಿ ಪ್ರಕಾಶವನ್ನು ಹೊಂದುತ್ತಾನೆ. ಅಂತಹ ಉಪಾಸಕನು ಭೌತಿಕ ಶರೀರ ಪರಿತ್ಯಾಗಾನಂತರ ಯಜುರ್ವೇದಾಭಿಮಾನಿ ದೇವತೆಗಳಿಂದ ಕರೆದುಕೊಂಡವನಾಗಿ ಅಂತರಿಕ್ಷದಲ್ಲಿರುವ ಸೋಮಲೋಕದಲ್ಲಿಡಲ್ಪಡುತ್ತಾನೆ. ಅಲ್ಲಿ ಯೋಗ್ಯ ಐಶ್ವರ್ಯ-ವನ್ನು ಅನುಭವಿಸಿ ಪುನಃ ಈ ಲೋಕದಲ್ಲಿ ಉತ್ತಮ ಬ್ರಾಹ್ಮಣರಲ್ಲಿ ಹುಟ್ಟಿ ಇನ್ನಷ್ಟು ತಪಸ್ಸು ಇತ್ಯಾದಿಗಳನ್ನಾಚರಿಸುತ್ತಾನೆ. ಯಾರು ಪರಮೇಶ್ವರನನ್ನು ಮೂರು ಮಾತ್ರೆಗಳ ಅರ್ಥಾನುಸಂಧಾನಪೂರ್ವಕ ಉಪಾಸನೆ ಮಾಡುತ್ತಿರುತ್ತಾನೋ ಅವನು ಭಗವತ್ಸಾಕ್ಷಾತ್ಕಾರವನ್ನು ಪಡೆದು ತೇಜೋರೂಪಿಯಾದ ಸೂರ್ಯನನ್ನು ಹೊಂದುತ್ತಾನೆ. ನಂತರ ಈ ರೀತಿ ಉಪಾಸನೆ ಮಾಡುವವನು ಪ್ರಾರಬ್ಧಕರ್ಮದಿಮದ ಮುಕ್ತನಾಗುತ್ತಾನೆ. ಹೇಗೆ ಎಂದರೆ – ಒಂದು ಸರ್ಪವು ತನ್ನ ಮುದಿ ಚರ್ಮ (ಪೊರೆಯನ್ನು) ವನ್ನು ಬಿಟ್ಟುಬಿಡುವುದೊ ಅದೇ ರೀತಿ ಎಂದು ತಿಳಿಯಬೇಕು.

**ಭಾಷ್ಯ :** **ಪ್ರಣವೇನ ಹರಿಂ ಧ್ಯಾಯನ್ ಬ್ರಹ್ಮಲೋಕಂ ಸಮೇತ್ಯಚ ।**
**ಜ್ಞಾನಂ ಚತುರ್ಮುಖಾತ್ ಪ್ರಾಪ್ಯಮುಚ್ಯತೇ ನಾತ್ರಸಂಶಯಃ ॥**

**ವಿಶೇಷ ವಿಷಯ :** ಏಕಮಾತ್ರ ಉಪಾಸಕನೆಂದರೆ – ಓಂಕಾರ ಘಟಿತವಾದ ಅಕಾರ, ಉಕಾರ, ಮಕಾರಗಳಿಂದ, ಪ್ರತಿಪಾದ್ಯವಾದ ಭಗವನ್ಮೂರ್ತಿಗಳಲ್ಲಿ ಒಂದನ್ನು ಮಾತ್ರ ಚೆನ್ನಾಗಿ ತಿಳಿದುಕೊಂಡು ಉಳಿದ ಎರಡು ರೂಪಗಳನ್ನು ಓಂಕಾರದಿಂದ ಧ್ಯಾನಿಸುವವನು ಎಂದರ್ಥವು.

ಅ, ಉ, ಮ ಮಾತ್ರೆಗಳಿಂದ ವಿಶ್ವ (ಜಾಗ್ರದವಸ್ಥಾ ಪ್ರೇರಕ) ತೈಜಸ (ಸ್ವಪ್ನಾವಸ್ಥಾ ಪ್ರೇರಕ) ಪ್ರಾಜ್ಞ (ಸುಷುಪ್ತಾವಸ್ಥಾ ಪ್ರೇರಕ). ಈ ರೂಪಗಳ ಮಹಿಮೆಗಳನ್ನು ಮಾಂಡುಕೋಪನಿಷತ್ತಿನಲ್ಲಿ ನೋಡುವುದು.

**ಅವತಾರಿಕಾ :** ಈವರೆಗೂ ತಿಳಿಸಿದ ಪ್ರಮೇಯ ಭಾಗದ ವಿಷಯದಲ್ಲಿ ಸಮಾಖ್ಯಾ ಕೊಡತಕ್ಕ ಎರಡು ವೇದೋಕ್ತ ಶ್ಲೋಕಗಳಿಂದ ಉದಾಹರಿಸಲ್ಪಡುತ್ತದೆ.

**ತದೇತೌ ಶ್ಲೋಕೌ ಭವತಃ । ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ । ಕ್ರಿಯಾಸು ಬಾಹ್ಯಾಂತರಮಧ್ಯ-ಮಾಸು ಸಮ್ಯಕ್‌ಪ್ರಯುಕ್ತಾಸು ನ ಕಂಪತೇಜ್ಞಃ । ಋಗ್ಭಿಃ ಏತಂ ಯಜುರ್ಭಿಃ ಅಂತರಿಕ್ಷಂ ಸಾಮಭಿಃ ಯತ್ ತತ್ ಕವಯಃ ವೇದಯಂತೇ ತಂ ಓಂಕಾರೇಣೈವ ಅಯನೇನ ಅನ್ವೇತಿ ವಿದ್ವಾನ್ ಯತ ತತ್ ಶಾಂತಂ ಅಜರಂ ಅಮೃತಂ ಅಭಯಂ ಪರಂ ಚ ಇತಿ ॥ 3 ॥**

**ತತ್ರೋಕ್ತೇಽರ್ಥೇ ಏತೌ ವಕ್ಷ್ಯಮಾಣೌ ಶ್ಲೋಕೌ ಸಂಮತಿತ್ವೇನ ಭವತಃ । ತಿಸ್ರೋಽಕಾರಾದ್ಯಾಃ ಪ್ರಣವಮಾತ್ರಾಃ ಅನವಿಪ್ರಯುಕ್ತಾ ಅನ್ಯೋನ್ಯಂ ಅಸಂಬದ್ಧಾಃ ಏಕೈಕಶೋ ಯೇನ ಜ್ಞಾತಾಃ ವಿಪ್ರ-ಯುಕ್ತಾ ನ ಭವಂತೀತಿ ಅವಿಪ್ರಯುಕ್ತಾಃ ನ ಅವಿಪ್ರಯುಕ್ತಾಃ ಅನವಿಪ್ರಯುಕ್ತಾಃ ವಿಪ್ರಯುಕ್ತಾ ಏವೇತಿ**

ಅರ್ಥಃ । ಅನ್ಯೋನ್ಯಸಕ್ತಾಃ ಪರಸ್ಪರಂ ಯುಗ್ಮತಯಾ ಸಂಬದ್ಧಾಃ ಯೇ ಕೇ ವಾ ದ್ವೇ ದ್ವೇ ಜ್ಞಾತ್ವೇತಿ ಯಾವತ್ । ಬಾಹ್ಯಾಭ್ಯಂತರಮಧ್ಯಮಾಸು ತಾರಮಂದ್ರಮಧ್ಯರೂಪಾಸು ಉಚ್ಚಾರಣಕ್ರಿಯಾಸು ಪ್ರಯುಕ್ತಾಃ ಉಚ್ಚಾರಿತಾ ಮೃತ್ಯುಮತ್ಯೋ ಭವಂತಿ । ಏಕೈಕಾಮೇವ ದ್ವೇ ದ್ವೇ ವಾ ಯೇ ಕೇಚಿತ್ ಸಮ್ಯಗ್ ಜ್ಞಾತ್ವಾಶೇಷಮಜ್ಞಾತ್ವಾ ಉಚ್ಚೈರ್ವಾ ನೀಚೈರ್ವಾ ಮಧ್ಯಮಾನೇನ ವಾ ಉಚ್ಚಾರಿತಾಃ ಪ್ರಣವಮಾತ್ರಾಃ ನ ಪುನರಾವೃತ್ತಿಫಲಂ ಪ್ರಾಪಯಂತೀತ್ಯರ್ಥಃ । ತಾಸು ಸಮ್ಯಕ್‌ಪ್ರಯುಕ್ತಾಸು ತಿಸ್ರೋಽಪಿ ಸಮ್ಯಗ್- ಜ್ಞಾತ್ವಾ ಉಚ್ಚಾರಿತಾಸು ಸತೀಷು ಜ್ಞೋ ಜ್ಞಾನೀ ನ ಕಂಪತೇ । ನ ಚ್ಯವತೇ । ನಾಪುನರಾವೃತ್ತಿಫಲಂ ಪ್ರಾಪ್ನೋತೀತಿ । ಏತದರ್ಥವಿವರಣಾರ್ಥೋ ದ್ವಿತೀಯೋ ಮಂತ್ರಃ । ಏಕಮಾತ್ರಾಜ್ಞಾನಪೂರ್ವಕೋ ಉಪಾಸನಾತ್ ಋಗ್ಭಿರೇನಂ ಪೃಥಿವ್ಯಾಖ್ಯಂ ಮಾನುಷಂ ಲೋಕಂ ಉಪಾಸಕೋ ನೀಯತೇ । ದ್ವಿಮಾತ್ರಾಜ್ಞಾನಪೂರ್ವಕೋಪಾಸನಾತ್ ಯಜುರ್ಭಿಃ ಅಂತರಿಕ್ಷಂ ತತ್ರಸ್ಥಸೋಮಲೋಕಂ ನೀಯತೇ । ಯತ್ತತ್ ಕವಯೋ ಜ್ಞಾನಿನೋ ವೇದಯಂತೇ ಜಾನಂತಿ ಜ್ಞಾಪಯಂತಿ ಚ । ಪರಾತ್ಪರಂ ಬ್ರಹ್ಮ ಯತ್ತಚ್ಛಾಂತಂ ಸುಖೋತ್ಕರ್ಷಸೀಮಾಭೂಮಿರೂಪಂ ಅಜರಂ ಜರಾದಿವರ್ಜಿತಂ ಪರಂ ಸರ್ವೋತ್ತಮಂ ಬ್ರಹ್ಮ ಓಂಕಾರೇಣೈವಾಯನೇನ ಅಯನಸಾಧನಮೋಂಕಾರಂ ಮಾತ್ರಾತ್ರಯಾತ್ಮಕಂ ಸಮ್ಯಗ್‌ಜ್ಞಾತ್ವಾ ಚೇತಿ ಯಾವತ್ । ಸಾಮಭಿಃ ಅನ್ವೇತೀತಿ ॥ 3 ॥

*॥ ಇತಿ ಪಂಚಮಪ್ರಶ್ನಪ್ರತಿವಚನಮ್ ॥*

**ಖಂಡಾರ್ಥ ಭಾವಾನುವಾದ :** ಮೇಲೆ ತಿಳಿಸಿದ ವಿಷಯಕ್ಕೆ ಸಂವಾದ ರೂಪವಾಗಿ ಈ ಶ್ಲೋಕವಿದೆ. ಓಂಕಾರ ಘಟಿತವಾದ ಅ, ಉ, ಮ ಎಂಬ ಮಾತ್ರೆಗಳಲ್ಲಿ ಒಂದೊಂದನ್ನು ಚೆನ್ನಾಗಿ ತಿಳಿದುಕೊಂಡು, ಅದರಿಂದ ಪ್ರತಿಪಾದ್ಯನಾದ ಭಗವಂತನನ್ನು ಧ್ಯಾನಿಸಿದರೆ ಅಥವಾ ಅವುಗಳಲ್ಲಿ ಎರಡೆರಡು ಮಾತ್ರೆಗಳ ಸಂಬಂಧವನ್ನು ಚೆನ್ನಾಗಿ ತಿಳಿದುಕೊಂಡು, ತಾರ, ಮಂದ್ರ, ಮಧ್ಯಸ್ಥಾಯಿಗಳಿಂದ ಉಚ್ಚರಿತನಾಗಿ ಧ್ಯಾನಿಸಿದರೆ, ಅಪುನರಾವೃತ್ತಿಯಿಲ್ಲ; ಪುನರಾವೃತ್ತಿಯೇ ಆಗುತ್ತದೆ ಏಕಮಾತ್ರೋಪಾಸಕನನ್ನು ಋಗಭಿಮಾನಗಳು ಮನುಷ್ಯಲೋಕಕ್ಕೂ, ದ್ವಿಮಾತ್ರೋಪಾಸಕನನ್ನು ಯಜುರಭಿಮಾನಿಗಳು ಅಂತರಿಕ್ಷದಲ್ಲಿರುವ ಸೋಮಲೋಕಕ್ಕೂ ಕೊಂಡೊಯ್ಯುತ್ತಾರೆ. ಉಪಾಸನೆ ಮಾಡಿದ ಜ್ಞಾನಿಶ್ರೇಷ್ಠರನ್ನು ಸಾಮಾಭಿಮಾನಿ ದೇವತೆಗಳು ಓಂಕಾರವೆಂಬ ಗಮನ ಸಾದನದಿಂದಲೇ ಶ್ರೀತತ್ತ್ವಕ್ಕಿಂತಲೂ ಉತ್ತಮವಾದ, ಜರಾಮೃತ್ಯುರಹಿತನಾದ (ಅಂದರೆ ನಿತ್ಯಮುಕ್ತನಾದ) ಸ್ವಭಕ್ತರಿಗೆ ಅಭಯಪ್ರದನಾದ, ಮುಕ್ತಾಶ್ರಯನಾದ ವಾಸುದೇವರೂಪಿ ಪರಮಾತ್ಮನಲ್ಲಿಗೆ ಕೊಂಡೊಯ್ಯುತ್ತಾರೆ.

ಆದುದರಿಂದ ಮುಮುಕ್ಷುಗಳು ಪ್ರಣವ ಮಂತ್ರವನ್ನು (ಓಂಕಾರವನ್ನು) ಮತ್ತು ಅದರ ಅರ್ಥವನ್ನೂ ಸರಿಯಾಗಿ ತಿಳಿದುಕೊಂಡು ಸರ್ವೋತ್ತಮನಾದ ಶ್ರೀಹರಿಯನ್ನು ಧ್ಯಾನಿಸಬೇಕು. ॥ 3 ॥

**ವಿಶೇಷ ವಿಷಯ :-** 1) ಅನವಿಪ್ರಯುಕ್ತಾ = ನ ವಿಪ್ರಯುಕ್ತಾಃ ವಿಯೋಗಿನ್ನೋನ ಭವತೀತಿ ಅವಿಪ್ರಯುಕ್ತಾಃ ನ ಅವಿಪ್ರಯುಕ್ತಾಃ - ಅನವಿಪ್ರಯುಕ್ತಾಃ ಪರಸ್ಪರಂ ಅಸಂಬದ್ಧಾಃ ಏಕೈಕಶೋ ಜ್ಞಾತಾಃ ಇತ್ಯರ್ಥಃ । ದ್ವೌ ನಞರ್ಥೌ ಪ್ರಕೃತ- ಮರ್ಥಂ ಸಾತಿಶಯಂ ಗಮಯತಃ - ಇತಿ ನ್ಯಾಯೇನ ವಿಮುಕ್ತೇನೈವ ಜ್ಞಾತಾಃ ಇತ್ಯರ್ಥಃ ॥

2) ಪ್ರಣವ ಮಂತ್ರವಾದ ಓಂಕಾರದಲ್ಲಿ ಮೂರು ಮಾತ್ರೆಗಳು ಇರುವುದು. ಉ, ಉ, ಮ ಎಂಬ ಮೂರು ಮಾತ್ರೆಗಳ ಪರಸ್ಪರ ಸಂಬಂಧರಹಿತವಾದವುಗಳು. ಆದರೆ ಒಂದೊಂದು ಸಲ ಎರಡೆರಡು ಮಾತ್ರೆಗಳ ಸಂಬಂಧವಿರುವುದು. ಹೇಗೆಂದರೆ ಅ + ಉ ಸೇರಿಸಿದಾಗ = ಓ ಆಗುತ್ತೆ ಹಾಗೇ ಓ + ಮ ರೂಡಿಸಿದಾಗ ಓಮ್ ಆಗುತ್ತೆ. ಇನ್ನು ಭಾಹ್ಯ = ತಾರ ಆಭಂತರ = ಮಂದ್ರ ಮಧ್ಯಮಸ್ವರಗಳಲ್ಲಿ ಇ ಓಂಕಾರ ರೂಪ ಪ್ರಣವವನ್ನು ಉಚ್ಚರಿಸಿದ್ದೇ ಆದರೆ ಅದರಿಂದ ಮೃತ್ಯುವನ್ನು ಅತಿಕ್ರಮಿಸಲಾಗುವುದು.

ಇನ್ನು ಮೂರು ಮಾತ್ರೆಗಳನ್ನು ಚೆನ್ನಾಗಿ ಅರ್ಥಾನುಸಂಧಾನಪೂರ್ವಕ ಉಪಾಸನಾ ಮಾಡಿದವನು ಮತ್ತೆ ಈ ಮಾನವ ಲೋಕದಲ್ಲಿ ಹುಟ್ಟದೇ ಮುಕ್ತಿಯನ್ನು ಪಡೆಯುತ್ತಾನೆ. ಈ ಒಂದು ವಿಶೇಷಾರ್ಥವನ್ನು ತಿಳಿಸಲು ಎರಡನೇ ಮಂತ್ರವು ಪ್ರವೃತ್ತವಾಗಿರುತ್ತೆ.

ಜ್ಞಾನಿಗಳಿಗೆ ತಿಳಿದಂಥಾ ಮತ್ತು ಅವರು ತಿಳಿಸಿಕೊಡುವಂಥಾ ಅವ್ಯಕ್ತ ತತ್ವಕ್ಕಿಂತಲೂ ಪರಮ ಉತ್ತಮವಾದ ಬ್ರಹ್ಮ ವಸ್ತವನ್ನು ಎಲ್ಲಿ ಸುಖದ ಉತ್ಕರ್ಷೆಯಾದ ಕೊನೆ-ಎಲ್ಲಿಯಾದರೆ ಮುಪ್ಪು-ರೋಗಾದಿಗಳು ಇರುವುದರಿಲ್ಲವೋ ಅಂಥಾ ಸ್ಥಾನವಾದ ಬ್ರಹ್ಮವಸ್ತುವನ್ನು ಹೊಂದುತ್ತಾನೆ. ಮೂರು ಮಾತ್ರೆಗಳನ್ನೂ ಅರ್ಥಾನುಪೂರ್ವಕ ಓಂ ಎಂಬ ಮಂತ್ರವನ್ನು ಉಚ್ಚಾರ ಮಾಡಿದವನಿಗೆ ತನ್ನ ದೇಹ ಪತನಾನಂತರ ಸಾಮವೇದಾಭಿಮಾನಿ ದೇವತೆಗಳಿಂದ ಕರೆದುಕೊಂಡವನಾಗಿ ಮುಕ್ತಿಯನ್ನು ಪಡೆಯುತ್ತಾನೆ. ಮತ್ತೆ ಜನ್ಮವೇ ಇರುವುದಿಲ್ಲ.

*ಇತಿ ಪಂಚಮಪ್ರಶ್ನಃ ॥*

★ ★ ★

# ಅಥ ಷಷ್ಠಃ ಪ್ರಶ್ನಃ

**ಅವತಾರಿಕಾ:** ಈ ಹಿಂದೆ ಸರ್ವಪ್ರಾಣಾದಿಗಳಿಗೆ ಜಾಗ್ರತ್ ಸ್ವಪ್ನ ಸುಷುಪ್ತಿ ಅವಸ್ಥಾಕಾಲದಲ್ಲಿ ಪರಮಾತ್ಮನ ಅಧೀನತ್ವವು ಉಕ್ತವಾಯಿತು. ಆದರೆ ಇಂತಹ ಭಗವದಧೀನತ್ವವು ಮೋಕ್ಷದಲ್ಲಿಯೂ ಇರುವುದೋ ಹೇಗೆ ತಿಳಿಸ-ಲಾಗಲಿಲ್ಲ. ಆದ್ದರಿಂದ ಈಗ ಸಿಂಹಾವಲೋಕ ನ್ಯಾಯದಿಂದ ಪ್ರಾಣಾದಿಗಳು ಮುಕ್ತಿ ಹೊಂದಿದಾಗ್ಯೂ ಭಗವದಧೀನತ್ವ-ವನ್ನು ತಿಳಿಸುವುದಕ್ಕೋಸ್ಕರ ಈಗ ಪ್ರವೃತ್ತವಾಗಿದೆ.

**ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ । ಭಗವನ್ ಹಿರಣ್ಯ-ನಾಭಃ ಕೌಸಲ್ಯೋ ರಾಜಪುತ್ರೋ ಮಾಮುಪೈತ್ಯೈನಂ ಪ್ರಶ್ನಮಪೃಚ್ಛತ । ಷೋಡಶಕಲಂ ಭಾರದ್ವಾಜಂ ಪುರುಷಂ ವೇತ್ಥ ತಂ ಮಹ್ಯಂ ಬ್ರವೀಹಿ ಇತಿ । ತಮಹಂ ಕುಮಾರಮಬ್ರುವಂ ನಾಹಮಿಮಂ ವೇದ ಯದ್ಯಹ-ಮಿಮಮವೇದಿಷ್ಯಂ ಕಥಂ ತೇ ನಾವಕ್ಷ್ಯಾಮಿತಿ । ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ ತಸ್ಮಾನ್ನಾರ್ಹಾಮ್ಯನೃತಂ ವಕ್ತುಮ್ ।**

**ಸ ತೂಷ್ಣೀಂ ರಥಮಾರುಹ್ಯ ಪ್ರವವ್ರಾಜ । ತಂ ತ್ವಾ ಪೃಚ್ಛಾಮಿ ಕ್ವಾಸೌ ಪುರುಷಃ ಇತಿ ॥ 1 ॥**

**ಅಥ ಹೈನಂ ಸುಕೇಶಾ ॥ ಪ್ರಾಕ್ ಪ್ರಾಣಾದೀನಾಂ ಶರೀರಣಶ್ಚ ಜಾಗ್ರತ್‌ಸ್ವಪ್ನ ಸುಷುಪ್ತಿಷು ಪರಮೇಶ್ವರಾಧೀನಮಭಿಹಿತಂ ನ ತು ಮೋಕ್ಷೇ । ಅತಃ ಸಿಂಹಾವಲೋಕನನ್ಯಾಯೇನ ಮುಕ್ತಾವಪಿ ತೇಷಾಂ ಭಗವದಧೀನತ್ವಪ್ರಕಾಶನಾರ್ಥಮುತ್ತರೋ ಗ್ರಂಥಃ । ಪ್ರಷ್ಟವ್ಯಾರ್ಥೇಽತಿಶಯಿತಬುಭುತ್ಸಾಂ ಸ್ವಸ್ಯ ಜ್ಞಾಪಯಿತುಂ ಪೂರ್ವವೃತ್ತಾಂತಕಥನಮ್ । ಭಗವನ್ ಹಿರಣ್ಯನಾಭೋ ನಾಮತಃ । ಕೋಸಲಾಯಾಂ ಭವಃ ಕೌಸಲ್ಯಃ ಕಸ್ಯಚಿದ್ರಾಜ್ಞಃ ಪುತ್ರೋ ಮಾಮುಪೇತ್ಯ ಪ್ರಾಪ್ಯೈನಂ ವಕ್ಷ್ಯಮಾಣಂ ಪ್ರಶ್ನಂ ಪ್ರಷ್ಟವ್ಯಾರ್ಥ-ಮಪೃಚ್ಛತ । ಹೇ ಭಾರದ್ವಾಜ ಷೋಡಶಕಲೋ ನಾಮ ಕಶ್ಚಿತ್ಪುರುಷೋಽಸ್ತೀತಿ ಸಾಮಾನ್ಯತೋ ಮಯಾ ಶೃತಮ್ । ತಂ ಷೋಡಶಕಲಂ ಪುರುಷಂ ತ್ವಂ ವೇತ್ಥ ವಿಶೇಷತೋ ಜಾನಾಸಿ ಕಿಂ ? ಕೋಽಸೌ ಪುರುಷಃ ಕ್ವ ಚಾಸ್ತೇ ? ಕಾ ನಾಮ ಷೋಡಶಕಲಾಃ ? ಕಥಂ ಚೈತಸ್ಯ ಶೋಡಷಕಲಮಿತ್ಯಾದಿ । ಯದಿ ಚ ಜಾನಾಸಿ ತರ್ಹಿ ಮಹ್ಯಂ ಬ್ರೂಹೀತಿ । ಏವಂ ಪೃಷ್ಟವಂತಂ ಕುಮಾರಂ ಪೂರ್ವವಯಸಿ ವರ್ತಮಾನಂ ಹಿರಣ್ಯ-ನಾಭಂ ಅಹಂ ಅಬ್ರುವಮ್ । ಅಹಮಿದಂ ತ್ವಯಾ ಪೃಷ್ಟಂ ಶೋಡಶಕಲಂ ಪುರುಷಂ ನ ವೇದ ನ ಜಾನಾಮಿ । ಕುತಃ ಯದ್ಯಹಮಿಮಂ ಪುರುಷಂ ಅವೇದಿಷ್ಯಂ ವಿದಿತವಾನಭವಿಷ್ಯಂ ತರ್ಹಿ ಕಥಂ ಕಸ್ಮಾದ್ ಯೋಗ್ಯಾಯ ತೇ ತುಭ್ಯಂ ನಾವಕ್ಷ್ಯಂ ಇತ್ಯತೋ ನಾಹಮಿಮಂ ವೇದ । ಕಿಂ ಚ ಯಃ ಪುರುಷಃ ಅನೃತಮಭಿವದತಿ ಸ ಏಷಃ ಸಮೂಲಃ ಪರಿಶುಷ್ಯತಿ ವೈ ಸರ್ವಾತ್ಮನಾ ಗತಸಾರೋ ಭವತಿ । ತೇನ ಅರ್ಜಿತಂ ಸಮಸ್ತಮಪಿ ಸುಕೃತಂ ನಶ್ಯತೀತಿ ಯಾವತ್ । ಯತ ಏವಂ ತಸ್ಮಾತ್ ಜ್ಞಾತ್ವಾಪಿ ನ ಜಾನಾಮೀತ್ಯನೃತಂ ವಕ್ತುಂ ದೋಷಜ್ಞೋಽಹಂ ನಾರ್ಹಾಮಿ । ನಾರ್ಹೋ ಭವಾಮೀತಿ ಏವ-ಮನೇಕಪ್ರಕಾರೇಣ ಪ್ರತ್ಯಾಯಿತಃ ಸಲಜ್ಜಯಾ ತೂಷ್ಣೀಂ ಕಿಮಪ್ಯವದನ್ ರಥಮಾರುಹ್ಯ ಪ್ರವವ್ರಾಜ ಯಥಾಗತಂ ಗತವಾನ್ । ಏವಂ ತದಾಪ್ರಭೃತಿ ಜ್ಞಾತವ್ಯತಯಾ ಮಮ ಹೃದಿ ವರ್ತಮಾನಂ ಪುರುಷಂ ತ್ವಾಂ ಪೃಚ್ಛಾಮಿ । ಕಿಮಿತಿ ? ಅಸೌ ಷೋಡಶಕಲಃ ಪುರುಷಃ ಕ್ವಾಸ್ತೇ ? ಕಾಶ್ಚ ತಾಃ ಕಲಾಃ ? ಕಥಂ ಚಾಸೌ ಷೋಡಶಕಲಃ ಇತ್ಯಾದಿ ॥ 1 ॥**

ಖಂಡಾರ್ಥ ಭಾವಾನುವಾದ : ಅನಂತರ ಸುಕೇಶ ಭರದ್ವಾಜ ಗುರುಗಳನ್ನು ಪ್ರಶ್ನಿಸಿದರು. ಪೂಜ್ಯರೇ, ಕೋಸಲ ದೇಶದ ರಾಜಪುತ್ರನಾದ ಹಿರಣ್ಯನಾಭನು ನನ್ನ ಬಳಿಗೆ ಬಂದು, ನಿಮಗೆ ಷೋಡಶಕಲಾ ಪುರುಷನ ವಿಷಯ ತಿಳಿದಿದೆಯೋ, ತಿಳಿದಿದ್ದರೆ ನನಗೆ ಹೇಳಿ ಎಂದನು. ಅದು ನನಗೆ ತಿಳಿಯದುದರಿಂದ ನಾನು ಅವನಿಗೆ ತಿಳಿದಿಲ್ಲವೆಂದೇ ಹೇಳಿದೆನು. ಏಕೆಂಗರೆ ತಿಳಿದಿದ್ದರೆ ತಿಳಿದಿಲ್ಲವೆಂದೂ ಅಥವಾ ತಿಳಿದಿಲ್ಲದಿದ್ದರೂ ತಿಳಿದಿದೆಯೆಂತಲೂ ಸುಳ್ಳು ಮಾತನಾಡಬಾರದು. ಹಾಗೆ ಸುಳ್ಳು ಮಾತನಾಡಿದರೆ ಆ ಮನುಷ್ಯನು ಮೂಲಸಹಿತವಾಗಿ ಒಣ ಹೋಗುತ್ತಾನೆ. ಆದ್ದರಿಂದ ನಾನು ಅನೃತವನ್ನು ಹೇಳುವುದಿಲ್ಲ. ನಂತರ ರಾಜಕುಮಾರನು ಏನೂ ಮಾತನಾಡದೆ ರಥವನ್ನೇರಿ ಹೊರಟುಹೋದನು. ಆ ವಿಷಯವು ಈಗ ನನ್ನ ಮನಸ್ಸಿನಲ್ಲಿ

ನಿಂತುಬಿಟ್ಟಿದೆ. ಅದನ್ನು ಅವಶ್ಯವಾಗಿ ತಿಳಿದುಕೊಳ್ಳಲೇಬೇಕು. ಆದ್ದರಿಂದ ಈಗ ನಾನು ನಿಮ್ಮನ್ನು ಕೇಳುತ್ತೇನೆ ಹೇಳಿರಿ. ಆ ಷೋಡಶಕಲಾ ಪುರುಷನು ಯಾರು ? ಅವನು ಎಲ್ಲಿದ್ದಾನೆ ? ಷೊಡಶಕಲೆಗಳು ಎಂದರೇನು ? ॥ 1 ॥

ರಾಜಕುಮಾರನಿಗೆ ಷೋಡಶಕಲಾ ಪುರುಷನೊಬ್ಬನಿದ್ದಾನೆ ಎಂಬ ಸಾಮಾನ್ಯಜ್ಞಾನವಿದ್ದೇ ಇದೆ; ಆದ್ದರಿಂದಲೇ ಅವನು ಪ್ರಶ್ನೆ ಮಾಡಿದ್ದು.

ಅವನ ವಿಷಯವಾಗಿ ವಿಶೇಷವಾಗಿ ತಿಳಿದುಕೊಳ್ಳಲು ಸುಕೇಶರನ್ನು ಪ್ರಶ್ನೆ ಮಾಡಿದನು. ವಿಶೇಷ ವಿಷಯಗಳು ಏನೆಂದರೆ ಆ ಷೋಡಶ ಕಲಾತ್ಮಕನಾದ ಪುರುಷನು ಯಾರು? ಎಲ್ಲಿದ್ದಾನೆ? ಆ ಕಲೆಗಳು ಯಾವುವು ? ಅವನಿಗೆ ಈ ಹದಿನಾರು ಕಲೆಗಳು ಹೇಗೆ ಬಂದವು? ॥ 1 ॥

**ವಿಶೇಷ ವಿಷಯ** – ಶ್ರೀ ವಾದಿರಾಜ ಶ್ರೀಪಾದರು ಉಪನಿಷತ್ತಿನ ಷೋಡಶಕಲಃ ಪುರುಷಃ ಕ್ವಾಸೇ ಎಂಬ ವಿವರಣೆಯನ್ನು ಹೀಗೆ ಹೇಳಿದ್ದಾರೆ.

**ಷೋಡಕಲಂ ಪುರುಷಂ ವೇತ್ಥ ಇತ್ಯತ್ರ ಪ್ರಾಣಾಧ್ಯಾಃ ಷೋಡಶಸಂಖ್ಯಾಕಾಃ ಕಲಾಃ ಯಸ್ಮಾತ್ತಂ ಷೋಡಷ-ಕಲಮಿತ್ಯರ್ಥಃ ॥ 1 ॥**

**ತಸ್ಮೈ ಸ ಹೋವಾಚ । ಇಹೈವಾಂತಃಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾಃ ಷೋಡಶಕಲಾಃ ಪ್ರಭವಂತೀತಿ । ಸ ಈಕ್ಷಾಂಚಕ್ರೇ ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ । ಸ ಪ್ರಾಣಮಸೃಜತ ಪ್ರಾಣಾತ್ ಶ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾತ್ ವೀರ್ಯಂ ತಪೋ ಮಂತ್ರಾಃ ಕರ್ಮ ಲೋಕಾಲೋಕೇಷು ನಾಮ ಚ ॥ 2 ॥**

ಏವಂ ಪೃಷ್ಟವತೇ ತಸ್ಮೈ ಸ ಹೊವಾಚ । ವಕ್ಷ್ಯಮಾಣಲಕ್ಷಣೈಃ ವಿಷ್ಣುರೇವ ಅಸೌ ಪುರುಷಃ ಇತಿ ಸೇತ್ಸ್ಯತೀತ್ಯಭಿಪ್ರಾಯೇಣ ಶಿಷ್ಯಸ್ಯ ಪರಿಹಾರಃ ಉಚ್ಯತೆ – ಇಹೈವೇತಿ । ಇಹ ಸೋಮ್ಯ ಯಸ್ಮಿನ್ ಪುರುಷೇ ಏತಾಃ ವಕ್ಷ್ಯಮಾಣಾಃ ಪ್ರಾಣಾದ್ಯಾಃ ಷೋಡಶಸಂಖ್ಯಾಕಾಃ ಕಲಾಃ ಸ ಜೀವಸ್ಯ ಶರೀರಸ್ಯ ಭಾಗಾಃ ಪ್ರಭವಂತಿ ಯಸ್ಮಾದುತ್ಪದ್ಯಂತೆ ಯಸ್ಮಿಂಶ್ಚ ಪ್ರತಿಷ್ಠಿತಾಃ ಮುಕ್ತಾಸ್ತತ್ಸ್ಯೋಯಮಾಶ್ರಿತ್ಯ ವರ್ತಂತೆ । ಅನೇನ ಷೋಡಶಕಲತ್ವಂ ಚ ಏತಸ್ಯ ಕಥಮಿತಿ ಪರಿಹೃತಂ ಭವತಿ । ಸ ಪುರುಷಃ ಇಹೈವ ಶರೀರೇ ಶರೀರಸ್ಯೈವ ಅಂತರಾಸ್ತೇ । ನಾವಶ್ಯಂ ತದ್ದರ್ಶನಾಯ ದೂರಂ ಗಂತವ್ಯಮಿತಿ ಅಭಿಪ್ರಾಯಃ । ಯಸ್ಮಿನ್ ಏತಾಃ ಷೋಡಶಕಲಾಃ ಪ್ರಭವಂತೀತ್ಯುಕ್ತಂ ಪ್ರಪಂಚ್ಯತೇ– ಸ ಇತ್ಯಾದಿ । ಸ ಪುರುಷಃ ಕಲ್ಪಾದೌ ಕಲಾಃ ಸೃಜಾಮೀತಿ ಈಕ್ಷಾಂಚಕ್ರೆ ಚಿಂತಿತವಾನ್ । ಪುನಶ್ಚ ಕಸ್ಮಿನ್ ಪುರುಷೇ ಶರೀರಾತ್ ಉತ್ಕ್ರಾಂತೇ (ಸತಿ) ಅಹಮುತ್ಕ್ರಾಂತೊ ಭವಿಷ್ಯಾಮಿ ? ಕಸ್ಮಿನ್ವಾ ತತ್ರ ಪ್ರತಿಷ್ಠಿತೇ ಅಹಮಪಿ ಪ್ರತಿಷ್ಠಾಸ್ಯಾಮೀತಿ ಪ್ರತಿಷ್ಠಿತೋ

ಭವಿಷ್ಯಾಮಿ ? ಕೋ ನು ಮದ್ವಶೀಕರಣಕ್ಷಮಭಕ್ತಿಜ್ಞಾನಾದಿಸಂಪನ್ನೋ ? ಯಂ ನಿಮಿತ್ತೀಕೃತ್ಯ ಅಹಂ ಕಲಾಃ ಸೃಜಾಮೀತ್ಯೇವಂ ಈಕ್ಷಿತ್ವಾ ತಾದೃಶಃ ಪ್ರಾಣ ಏವೇತಿ ನಿಶ್ಚಿತ್ಯ ಸ ಪುರುಷಃ ಪ್ರಾಣಂ ಜೀವ-ಕಲಾಭಿಮಾನಿನಂ ಅಸೃಜತ । ಪ್ರಾಣಾತ್ ತಂ ಪ್ರಾಣಂ ನಿಮಿತ್ತೀಕೃತ್ಯ ಶ್ರದ್ಧಾಂ ಜೀವಸ್ಯ ಆಸ್ತಿಕ್ಯನಿಷ್ಠಾ-ಭಿಮಾನಿನೀಂ ಭಾರತೀಂ ಅಸೃಜತ । ತತಃ ಖಂ ವಾಯುಃ ಜ್ಯೋತಿರಾಪಃ ಪೃಥಿವೀತ್ಯೇತಾನಿ ಶರೀ-ರೋಪಾದಾನಭೂತಾನಿ ಭೂತಾನಿ ತದಭಿಮಾನಿನೋ ವಿಘ್ನೇಶಾದ್ಯಾಃ ದೇವಾಃ ಇಂದ್ರಿಯಚಕ್ಷುರಾದಿ-ಪ್ರವೃತ್ತೌ ಉಪಕರಣಂ ಸೂರ್ಯಾದಿದೇವಾಃ ಮನಃಪ್ರಧಾನಕರಣಂ ತದ್ದೇವಾಃ ವೀಂದ್ರಶೇಷಕಾಮಾ-ನಿರುದ್ಧಾಃ। ಅನ್ನಂ ತತ್ಸ್ಥಿತಿಕಾರಣಂ ತನ್ಮಾನೀ ಸೋಮಃ। ತಸ್ಮಾಚ್ಚ ಅನ್ನಾತ್ ಅನ್ನಂ ನಿಮಿತ್ತೀಕೃತ್ಯ ವೀರ್ಯಂ ಶರೀರಹೇತುಭೂತಂ ತದ್ದೇವತಾ ವರುಣಃ । ತಪೋ ಜೀವಸ್ಯ ಜ್ಞಾನಾದಿಹೇತುತಯಾ ಸುಖಸಾಧನಂ ತದಭಿಮಾನೀ ವಹ್ನಿಃ ಮಂತ್ರಾ ಋಗಾದಿವೇದಾಃ ಸಾಕ್ಷಾತ್‌ಜ್ಞಾನಾದಿಹೇತವಃ ತದ್ದೇವತಾ ಸ್ವಾಹಾ । ಕರ್ಮ ಪುಣ್ಯಾಪುಣ್ಯಲಕ್ಷಣಮ್ । ಸುಖಾದಿನಿಮಿತ್ತಮ್ । ತದಭಿಮಾನೀ ಪುಷ್ಕರಃ । ಲೋಕಾಃ ಗೋಲಕಾಃ। ಇಂದ್ರಿಯಾಶ್ರಯಭೂತಾಃ। ತದ್ದೇವಃ ಪರ್ಜನ್ಯಃ। ನಾಮ ದೇವದತ್ತಾದಿಕಮ್। ತನ್ಮಾನಿನೀ ಉಷಾ ಇತ್ಯೇತಾಃ ಕಲಾಃ ಪುರುಷೇಣ ಸೃಷ್ಟಾ ಇತಿ ಗ್ರಾಹ್ಯಮ್ । ಅತ್ರ ಸ ಪ್ರಾಣಮಸೃಜತ । ಪ್ರಾಣಾತ್ ಶ್ರದ್ಧಾಂ ಇತ್ಯಾದೌ ಅನ್ನಾದ್ವೀರ್ಯಮಿತಿ ಮಧ್ಯೇ । ಲೋಕೇಷು ಸೃಷ್ಟೇಷು ಸತ್ಸು ನಾಮ ಚೇತ್ಯಂತೇಽಪಿ ಕಥನೇನ ಪೂರ್ವಪೂರ್ವೋತ್ಪನ್ನಾಃ ಕಲಾಃ ನಿಮಿತ್ತೀಕೃತ್ಯೋತ್ತರೋತ್ತರಾಃ ಕಲಾಃ ಪರಮೇಶ್ವರೇಣ ಸೃಷ್ಟಾ ಇತಿ ಸೂಚ್ಯತೇ । ತಚ್ಚ ಯಥೋಕ್ತಕ್ರಮೇಽನುಪಪನ್ನಂ ಅತೋ ಭಾಷ್ಯಾದ್ಯುಕ್ತದಿಶಾ ಕ್ರಮೋ ಅವಗಂತವ್ಯಃ ॥ 2 ॥

ಭಾವಾರ್ಥ : ಪಿಪ್ಪಲಾದರು ಸುಕೇಶರಿಗೆ ಸಂತೋಷದಿಂದ ಉತ್ತರಿಸಿದರು. ಷೋಡಶಕಲಾಪುರುಷನು ಈ ಶರೀರದೊಳಗೆ ಇದ್ದಾನೆ. ಅದನ್ನು ದರ್ಶನ ಮಾಡಲು ದೂರದೇಶಕ್ಕೆ ಹೋಗಬೇಕಾಗಿಲ್ಲ. ಈ ಪುರುಷನಿಂದಲೇ (ಭಗವಂತನಿಂದಲೇ)ಮುಂದೆ ಹೇಳುವ ಪ್ರಾಣಾದಿ ಹದಿನಾರು ಕಲೆಗಳೂ ಉತ್ಪನ್ನವಾಗಿದೆ ಅವನನ್ನೇ ಆಶ್ರಯ ಮಾಡಿ-ಕೊಂಡು ಕಲೆಗಳು ಮುಕ್ತಿಯಲ್ಲಿಯೂ ಇರುತ್ತವೆ. ಭಗವಂತನು ಸೃಷ್ಟಿಮಾಡಬೇಕೆಂದು ಇಚ್ಛಿಸಿದನು; ಅಂದರೆ ಯಾರಲ್ಲಿ ತಾನು ಪ್ರವೇಶಮಾಡಿ ಸೃಷ್ಟಿಸಬೇಕೆಂದು ಯೋಚಿಸಿದನು. ಯಾರು ಈ ಶರೀರದಿಂದ ಉತ್ಕ್ರಮಣ ಮಾಡಿದರೆ ತಾನೂ ಉತ್ಕ್ರಮಿಸಬೇಕು, ಯಾರು ಸ್ಥಿತರಾದರೆ ತಾನು ಪ್ರತಿಷ್ಠಿತನಾಗಬೇಕು– ಅಂತಹವನು ಯಾರು ? ಅವನು ಮುಖ್ಯಪ್ರಾಣನೇ ಎಂದು ನಿಶ್ಚಯಿಸಿ, ಮೊದಲು ಉಚ್ಛ್ವಾಸನಿಃಶ್ವಾಸ ರೂಪ ಜೀವ ಕಲಾಭಿಮಾನಿ ಪ್ರಾಣವನ್ನು ಸೃಷ್ಟಿಸಿದನು. ಅವನನ್ನು ನಿಮಿತ್ತೀಕರಿಸಿಕೊಂಡು ಜೀವನಿಗೆ ಆಸ್ತಿಕ್ಯಬುದ್ಧಿರೂಪ ಶ್ರದ್ಧಾವನ್ನು ಶರೀರಕ್ಕೆ ಉಪಾದಾನ ಕಾರಣನಾದ ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶವನ್ನೂ, ಪ್ರವೃತ್ತಿಯನ್ನುಂಟುಮಾಡಲು ಚಕ್ಷುರಾದಿ ಇಂದ್ರಿಯಗಳನ್ನೂ, ಪ್ರಧಾನಕಾರಣನಾದ ಮನಸ್ಸನ್ನೂ, ಸ್ಥಿತಕಾರಣವಾದ ಅನ್ನವನ್ನೂ, ಶರೀರೋಪಾದಾನವಾದ ವೀರ್ಯವನ್ನೂ, ಜ್ಞಾನಾದಿಗಳಿಗೆ ಸಾಧನೀ-ಭೂತವಾದ ತಪಸ್ಸನ್ನೂ, ಯಥಾರ್ಥ ಜ್ಞಾನಾದಿಗಳಿಗೆ ಕಾರಣವಾದ, ಋಗಾದಿ ಮಂತ್ರಗಳನ್ನೂ ಸುಖಾದಿ ಸಾಧನವಾದ ಪುಣ್ಯಾಪುಣ್ಯರೂಪ ಕರ್ಮವನ್ನೂ, ಇಂದ್ರಿಯಗಳಿಗೆ ಆಶ್ರಯವಾದ ಗೋಳಕಗಳನ್ನೂ, ದೇವದತ್ತಾದಿ ನಾಮಗಳನ್ನು ಸೃಷ್ಟಿಸಿದನು.

**ವಿಶೇಷ ವಿಷಯ -**

1) ಸ ಪ್ರಾಣಮಸೃಜತ, ಪ್ರಾಣಾತ್, ಶ್ರದ್ಧಾಂ ಖಂ, ವಾಯುಃ ಜ್ಯೋತಿಃ, ಅಪಃ, ಪೃಥಿವೀ, ಅನ್ನಂ, ವೀರ್ಯಂ ಲೋಕಾಃ, ನಾಮಃ - ಎಂಬಲ್ಲಿವೆ ಮೊದಲು ಮೊದಲು ಸೃಷ್ಟಿಸಿದುದನ್ನು ನಿಮಿತ್ತೀಕರಿಸಿಕೊಂಡು ಮುಂದಿನವುಗಳನ್ನು ಪರಮೇಶ್ವರನು ಸೃಷ್ಟಿಸಿದನು ಎಂದು ಸೂಚಿತವಾಗಿದೆ. ಹೇಗೆಂದರೆ, ಪ್ರಾಣ, ಶ್ರದ್ಧಾ, ಖಂ ವಾಯು .... ಇತ್ಯಾದಿ.

ಈ ಮಂತ್ರದಲ್ಲಿ ಪ್ರಾಣಾದಿ ಉತ್ಪತ್ತಿಯನ್ನು ಹೇಳುವಾಗ ಅಪಃ ಪೃಥಿವೀಂದ್ರಿಯಂ ಮನೋನ್ನಂ .... ಇತ್ಯಾದಿಯಾಗಿ ಹೇಳಿದೆ. ಅಂದರೆ ಇಂದ್ರಿಯಗಳ ಉತ್ಪತ್ತಿಯಾದ ಮೇಲೆ ಮನಸ್ಸು ಅವುಗಳಿಂದೇ ಉತ್ಪನ್ನವಾಯಿತೆಂದು ತಿಳಿದುಬರುತ್ತದೆ. ಇದು ಸರಿಯಲ್ಲ; ಯಾಕೆಂದರೆ ಅಥರ್ವಣೋನಿಷತ್ತಿನಲ್ಲಿ ಇದೇ ವಿಷಯವನ್ನು ನಿರೂಪಿಸುವಾಗ (3-3) ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಾಣಿ ಚ । ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಧಾರಿಣೀ ಎಂದು ಹೇಳಿದೆ. ಇದರ ಪ್ರಕಾರವಾಗಿ ಮನಸ್ಸು ಉತ್ಪನ್ನವಾದ ನಂತರ ಇಂದ್ರಿಯಗಳ ಉತ್ಪತ್ತಿ ಎಂದಾಗುತ್ತದೆ. ಇದೇ ಸರಿಯಾದ ಕ್ರಮವೆಂದು ಶ್ರೀ ಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ಸಮರ್ಥನೆ ಮಾಡಿದ್ದಾರೆ । ಹೆಚ್ಚು ವಿಷಯಗಳನ್ನು ಭಾಷ್ಯ ಟೀಕಾದಿಗಳಿಂದ ತಿಳಿಯತಕ್ಕದ್ದು. ಹೀಗೆ ತಾರತಮ್ಯವನ್ನು ತಿಳಿದುಕೊಂಡು ಪ್ರಾಣನಿಗೂ ಉತ್ತಮೋತ್ತಮವಾದ ನಿತ್ಯ ಮುಕ್ತನಾದ ಮಹಾವಿಷ್ಣುವು ಸರ್ವೋತ್ಕೃಷ್ಟನೆಂದು ತಿಳಿದರೆ ಮಾತ್ರ ಮೋಕ್ಷವಾಗುತ್ತದೆ. ಈ ರೀತಿ ಕಲಾಭಿಮಾನಿಗಳ ತಾರತಮ್ಯವು ಮುಕ್ತಿಯಲ್ಲಿಯೂ ಪರಮ ಪುರುಷನಾದ ಶ್ರೀ ಹರಿಯ ಆಶ್ರಯದಲ್ಲಿ ಇರುತ್ತದೆ.

ಷೋಡಶಕಲಾಭಿಮಾನಿಗಳನ್ನು ಶ್ರೀಮದಾಚಾರ್ಯರು ಹೀಗೆ ಉದಾಹರಿಸಿದ್ದಾರೆ.

**ಭಾಷ್ಯದಲ್ಲಿ**

ಕರ್ಮೇತಿ ಪುಷ್ಕರ ಪ್ರೋಕ್ತ ಉಷಾ ನಾಮಾಭಿಮಾನಿನೀ ।
ಲೋಕಾಭಿಮಾನೀ ಪರ್ಜನ್ಯಃ ಸ್ವಾಹಾ ವೈ ಮಂತ್ರದೇವತಾ ।
ತಪೋಭಿಮಾನೀ ವಹ್ನಿಶ್ಚ ವರುಣೋ ವೀರ್ಯದೇವತಾ ।
ಅನ್ನಸ್ಯ ದೇವತಾ ಸೋಮಃ ಮನೋನಾಮಾನಿರುದ್ಧಕಃ ।
ಇಂದ್ರಿಯೇಶಾಶ್ಚ ಸೂರ್ಯಾದ್ಯಾಃ ಚಕ್ಷುರಾದ್ಯಭಿಮಾನಿನಃ ।
ರುದ್ರೋ ವೀಂದ್ರಃ ಶೇಷಕಾಮೌ ಮನಸಸ್ತ್ವೇವ ದೇವತಾಃ ।
ಶ್ರದ್ಧೇತಿ ವಾಯೋಃ ಪತ್ನೀ ಸ್ಯಾತ್ ಸರ್ವೇಷಾಂ ಪ್ರಭವಾಪ್ಯಯಾ ।
ತಸ್ಯಾಪೀಶಃ ಕಾರಣಂ ಚ ವಾಸುದೇವಃ ಪರೋವ್ಯಯಃ ।
ನ ತಸ್ಯ ಸದೃಶಃ ಕಶ್ಚಿತ್ ಕುತ ಏವೋತ್ತಮೋ ಭವೇತ್ ।
ತಂ ಜ್ಞಾತ್ವಾ ಮುಚ್ಯತೇ ಜಂತುವಿದಿತ್ವೈವಂ ಪರಾತ್ಪರಮ್ ॥ ಇತಿ ತತ್ವವಿವೇಕೇ ।

**ಅನುವಾದ** : ಕರ್ಮಕ್ಕೆ ಅಭಿಮಾನಿ ಪುಷ್ಕರ, ನಾಮಕ್ಕೆ ಅಭಿಮಾನಿನಿ ಉಷಾದೇವಿ. ಗೋಲಕಗಳಿಗೆ ಅಭಿಮಾನಿ ದ್ವಾದಶಾದಿತ್ಯರಲ್ಲಿ ಒಬ್ಬನಾದ ಪರ್ಜನ್ಯ, ಮಂತ್ರಕ್ಕೆ ಅಗ್ನಿ ಭಾರ್ಯೆಯಾದ ಸ್ವಾಹಾದೇವೀ ಅಭಿಮಾನಿನಿ. ತಪಸ್ಸಿಗೆ ಅಭಿಮಾನಿ ವಹ್ನಿ, ವೀರ್ಯಕ್ಕೆ ಅಭಿಮಾನಿ ವರುಣ, ಅನ್ನಾಭಿಮಾನಿ ಸೋಮ, ಮನಸ್ಸಿಗೆ ಅನಿರುದ್ಧ, ರುದ್ರ, ಗರುಡ, ಶೇಷ, ಕಾಮರು ಅಭಿಮಾನಿಗಳು. ಚಕ್ಷು ಮೊದಲಾದ ಇಂದ್ರಿಯಗಳಿಗೆ ಸೂರ್ಯನೇ ಮೊದಲಾದವರು ಪ್ರತ್ಯೇಕವಾಗಿ ಅಭಿ-ಮಾನಿಗಳು. ತ್ವಕ್‌ಗೆ ಪ್ರಾಣ, ನಾಲಿಗೆಗೆ ವರುಣ, ಮೂಗಿಗೆ ಅಶ್ವಿನಿ ದೇವತೆಗಳು, ವಾಗಿಂದ್ರಿಯಕ್ಕೆ ಅಗ್ನಿ, ಕೈಗಳಿಗೆ ದಕ್ಷ, ಕಾಲುಗಳಿಗೆ ಜಯಂತ, ಗುದಕ್ಕೆ ಸೂರ್ಯ. ಗುಹ್ಯೇಂದ್ರಿಯಕ್ಕೆ ಮನು ಅಭಿಮಾನಿ. ಆಸ್ತಿಕ್ಯಬುದ್ಧಿಗೆ ಭಾರತಿಯು ಅಭಿಮಾನಿ.

ಮೊದಲು ಹುಟ್ಟಿದ ದೇವತೆಗಳು ನಂತರ ಹುಟ್ಟಿದ ದೇವತೆಗಳಿಗೆ ಅಧಿಪತಿಗಳಾಗುತ್ತಾರೆ. ಅವಳು ಅವರೆಲ್ಲರು ಉತ್ಪತ್ತಿ-ನಾಶಗಳಿಗೆ ಕಾರಣಳು. ಭಾರತಿದೇವಿಗೂ ಶ್ವಾಸ-ನಿಶ್ವಾಸ ರೂಪ ಪ್ರಾಣಕಲಾಭಿಮಾನಿ ಮುಖ್ಯಪ್ರಾಣನು ಕಾರಣ. ಆದ್ದರಿಂದ ಮುಖ್ಯಪ್ರಾಣನು ಎಲ್ಲರೊಳಗೆ ಉತ್ತಮೋತ್ತಮ. ಮುಖ್ಯಪ್ರಾಣನಿಗೂ ನಾಶರಹಿತನಾದ, ಸರ್ವೋತ್ತಮನಾದ ವಾಸುದೇವನು ಕಾರಣನಾಗಿದ್ದಾನೆ. ಅವನಿಗೆ ಸಮಾನವಾದವನು ಯಾರೂ ಇಲ್ಲ, ಉತ್ತಮನು ಇನ್ನೆಲ್ಲಿ? ಸರ್ವಶ್ರೇಷ್ಠನಾದ ಪರಮಾತ್ಮನನ್ನು ಹೀಗೆ ತಿಳಿದರೆ ಜೀವ ಮುಕ್ತನಾಗುವನು ಎಂದು ತತ್ತ್ವವಿವೇಕ ಎಂಬ ಗ್ರಂಥದಲ್ಲಿ ಹೇಳಿದೆ.

2) ಮುಂದೆ ಯಥೆಮಾ ನದ್ಯಾಃ ..... (6-3) ಎಂದು ಷೋಡಶಕಲೆಗಳಿಗೆ ಜೀವನ ಸಂಗಡ ಮೋಕ್ಷದಲ್ಲಿ ಪುರುಷ ಪ್ರಾಪ್ತಿಯನ್ನು ಉಪನಿಷತ್ತು ಹೇಳುತ್ತದೆ. ಕಲೆಗಳೆಲ್ಲವೂ ಜಡರೂಪವಾದುದರಿಂದ ಇದು ಅಸಂಭವ. ಆದ್ದರಿಂದ ಕಲಾ ಶಬ್ದದಿಂದ ಕಲಾಭಿಮಾನಿ ದೇವತೆಗಳೇ ವಿವಕ್ಷಿತವು. ಈ ಮಂತ್ರಕ್ಕೆ ವ್ಯಾಖ್ಯಾನರೂಪವಾಗಿರುವ ಸ್ಮೃತಿಯನ್ನು ಶ್ರೀ ಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ಪ್ರಮಾಣವಾಗಿ ಉದಾಹರಿಸಿದ್ದಾರೆ :-

**ತತ್ತ್ವ ವಿವೇಕ ಸ್ಮತಿ :-**

1) ಜೀವ ಕಲಾಭಿಮಾನಿ ಪ್ರಾಣನು;

2) ಜೀವನ ಅಸ್ತಿಕ್ಯನಿಷ್ಠಾಭಿಮಾನಿನೀ - ಭಾರತೀ, - ಶ್ರದ್ಧಾ;

3) ಖಂ (ಆಕಾಶ) ಅಭಿಮಾನಿ - ವಿಘ್ನೇಶ್ವರ;

4) ವಾಯು ಅಭಿಮಾನಿ - ಮರುತ್;

5) ಅಗ್ನಿ ಅಭಿಮಾನಿ - ಪಾವಕನಾಮಕ ಅಗ್ನಿ;

6) ಜಲಾಭಿಮಾನಿ - ಬುಧ;

7) ಪೃಥಿವೀ ಅಭಿಮಾನಿ - ಶನಿ;

8) ಚಕ್ಷುರಾದಿ ದಶೇಂದ್ರಿಯ ಅಭಿಮಾನಿಗಳು ಸೂರ್ಯಾದಿಗಳು;

9) ಪ್ರಧಾನ ಸಾಧನ ಇಂದ್ರ. ಮನೋಭಿಮಾನಿಗಳು ರುದ್ರ, ಗರುಡ, ಶೇಷ, ಕಾಮ, ಅನಿರುದ್ಧ

10) ದೇಹಸ್ಮೃತಿ ಕಾರಣ ಅನ್ನಾಭಿಮಾನಿ ಸೋಮ;

11) ಶರೀರಹೇತುಭೂತ ವೀರ್ಯಾಭಿಮಾನಿ - ವರುಣ;

12) ಸುಖಸಾಧನ ಜ್ಞಾನಕ್ಕೆ ಕಾರಣನಾದ ತಪೋಭಿಮಾನಿ ವಹ್ನಿ;

13) ಯಥಾರ್ಥ ಜ್ಞಾನಾದಿ ಸಾಧನೀಭೂತ ಋಗಾದಿ ಮಂತ್ರಾಭಿ ಮಾನಿನೀ ಸ್ವಾಹಾ ದೇವಿ;

14) ಸುಖದುಃಖಗಳಿಗೆ ಕಾರಣವಾದ ಪುಣ್ಯಪಾಪ ರೂಪ ಕರ್ಮಾಭಿಮಾನಿ ಪುಷ್ಕರ;

15) ಇಂದ್ರಿಯಗಳಿಗೆ ಆಶ್ರಯವಾದ ಗೋಳಕಾಭಿಮಾನಿ ಪರ್ಜನ್ಯ;

16) ಲೋಕವ್ಯವಹಾರಕ್ಕೆ ಬೇಕಾದ ನಾಮಗಳ ಅಭಿಮಾನಿನೀ ಉಷಾ ॥ 2 ॥

**ಅವತಾರಿಕಾ :** ಈ ಹಿಂದೆ ತಿಳಿಸಿದಂತೆ ಜೀವನೊಂದಿಗೆ ಕಲಾಭಿಮಾನಿ ದೇವತೆಗಳಿಗೆ ಪರಮಾತ್ಮನ ಲೋಕಪ್ರಾಪ್ತಿ-ಯನ್ನು ಮುಂದೆ ತಿಳಿಸಲಾಗುತ್ತೆ.

**ಯಥೇಮಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಃ ತಂ ಗಚ್ಛಂತಿ ಭಿದ್ಯತೆ ತಾಸಾಂ ನಾಮರೂಪೇ ಸಮುದ್ರಃ ಇತ್ಯೇವಂ ಪ್ರೋಚ್ಯತೇ । ಏವಮೇವಾಸ್ಯ ಪರಿದ್ರಷ್ಟುಃ ಇಮಾಃ ಷೋಡಶ-ಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಃ ತಂ ಗಚ್ಛಂತಿ ಭಿದ್ಯೇತೆ ಚ ಅಸಾಂ ನಾಮರೂಪೇ ಪುರುಷಃ ಇತಿ ಏವಂ ಪ್ರೋಚ್ಯತೆ ಸಃ ಏಷೋ-ಽಕಲೋ ಅಮೃತೋ ಭವತಿ ॥ 3 ॥**

**ಏತಾ ಸಾ ಚ ಕಲಾ ದೇವತಾನಾಂ ಜೀವೇನ ಸಹ ಮೋಕ್ಷೇ ಪುರುಷಪ್ರಾಪ್ತಿರುಚ್ಯತೆ- ಯಥೇಮಾ ನದ್ಯಃ ಇತ್ಯಾದಿನಾ । ಯಥಾ ಲೋಕೇ ಇಮಾಃ ಪ್ರಸಿದ್ಧಾಃ ಸ್ಯಂದಮಾನಾಃ ಪ್ರಸ್ರವಂತ್ಯಃ ಸಮುದ್ರ ಏವ ಅಯನಂ ಆಶ್ರಯೋ ಯಾಸಾಂ ತಾಃ ನದ್ಯಃ ಸಮುದ್ರಂ ಪ್ರಾಪ್ಯ ಅಸ್ತಮದರ್ಶನಂ ಗಚ್ಛಂತಿ ಪ್ರಾಪ್ನುವಂತಿ । ಅಜ್ಞಾನಾಂ ಅದರ್ಶನಂ ಗತಾನಾಮಪಿ ತಾಸಾಂ ಸಮುದ್ರೇ ಸ್ಥಿತಾನಾಂ ನದೀನಾಂ ಗಂಗಾಯಮು-ನೇತ್ಯಾದಿ ನಾಮರೂಪೇ ಭಿದ್ಯೇತೆ ವಿವಿಕ್ತೇ ತಿಷ್ಠತ ಇತಿ ಏವಂ ವಿದ್ವದ್ಭಿಃ ಪ್ರೋಚ್ಯತೇ । ಏವಮೇವ ಅಸ್ಯ ಪುರುಷಸ್ಯ ಪರಿದ್ರಷ್ಟುಃ ಜ್ಞಾನಿನೋ ಜೀವಸ್ಯ ಷೋಡಶಕಲಾಃ ಪ್ರಾಣಾದ್ಯಾಃ ಪುರುಷಾಯಣಾಃ ಪುರುಷ ಏವಾಯನಂ ಆಶ್ರಯೋ ಯೇಷಾಂ ತೇ ತ ಏವ ಪುರುಷಂ ಪ್ರಾಪ್ಯಾಃ ತಂ ಅಜ್ಞೈಃ ಅಜ್ಞೇಯತ್ವಂ ಗಚ್ಛಂತಿ । ಅಸಾಂ ಪುರುಷೇ ಸ್ಥಿತಾನಾಂ ತಾಸಾಂ ನಾಮರೂಪೇ ಭಿದ್ಯೇತೇ ವಿವಿಕ್ತೇ ತಿಷ್ಠತಃ ಇತ್ಯೇವಂ ವಿದ್ಯದ್ಭಿಃ ಪ್ರೋಚ್ಯತೆ । ತಥಾ ಚ ಕಲಾದೇವತಾಸು ಮುಕ್ತಂ ಗತಾಸು ಸ ಏವ ಜೀವಃ ನಷ್ಟಾಚೇತನಕಲೋ ಭವತಿ । ತತಃ ಏವ ಅಮೃತೋ ಭವತಿ । ಕಲಾನಿಮಿತ್ತಂ ಹಿ ಮರಣಮಸ್ಯೇತಿ ॥ 3 ॥**

**ಭಾವಾರ್ಥ** - ಹೇಗೆ ನದಿಗಳು ಸಮುದ್ರದ ಕಡೆಗೆ ಹರಿಯುವ ಸ್ವಭಾವದಿಂದ ಸಮುದ್ರವನ್ನು ಸೇರುತ್ತವೆಯೋ, ಹಾಗೆ ಸೇರಿ ತಮ್ಮ ಹೆಸರು ಮತ್ತು ರೂಪಾದಿಗಳು ಸಾಮಾನ್ಯ ಜನರಿಗೆ ಗೋಚರವಾಗದಂತೆ ಅದೃಶ್ಯವಾಗಿರುತ್ತವೆಯೋ ಆದರೆ ಜ್ಞಾನಿಗಳು ಆಯಾಯ ನಾಮರೂಪಗಳು ಸಮುದ್ರದಲ್ಲಿ ಭಿನ್ನ ಭಿನ್ನವಾಗಿಯೇ ಇರುತ್ತವೆಯೆಂದು ಹೇಳು-ತ್ತಾರೆಯೋ, ಹಾಗೆಯೇ ಜೀವನು ಮುಕ್ತನಾಗುವ ಕಾಲದಲ್ಲಿ ಷೋಡಶಕಲಾ ದೇವತೆಗಳು, (ಅವನನ್ನು ಬಿಟ್ಟು) ತಮ್ಮ ಮುಖ್ಯಾಶ್ರಯನಾದ ಭಗವನ್ನಾರಾಯಣನನ್ನು ಪ್ರವೇಶಿಸುತ್ತಾರೆ. ಅಜ್ಞಜನರು ಆ ದೇವತೆಗಳು ನಾರಾಯಣನೇ ಆಗುತ್ತಾ-ರೆಂದು ತಿಳಿಯುತ್ತಾರೆ. ಹೇಗೆ ನದಿಗಳು ಸಮುದ್ರವನ್ನು ಸೇರಿದರೂ ಅದರಲ್ಲಿ ಭಿನ್ನ ಭಿನ್ನವಾಗಿಯೇ ಇರುತ್ತವೆಯೋ ಹಾಗೆಯೇ ಆ ದೇವತೆಗಳು ನಾರಾಯಣನೇ ಆಗುತ್ತಾರೆಂದು ತಿಳಿಯುತ್ತಾರೆ. ಹೇಗೆ ನದಿಗಳು ಸಮುದ್ರವನ್ನು ಸೇರಿದರೂ ಅದರಲ್ಲಿ ಭಿನ್ನವಾಗಿಯೇ ಇರುತ್ತವೆಯೋ ಹಾಗಾದರೆ ಆ ದೇವತೆಗಳು ಭಗವಂತನಲ್ಲಿ ತಮ್ಮ ನಾಮರೂಪಗಳನ್ನು ಬಿಡ-ದೆಯೇ (ಅವುಗಳ ಸಹಿತವಾಗಿಯೇ) ಇರುತ್ತಾರೆ. ಅವರುಗಳಿಂದ ಅಭಿಮನ್ಯಮಾನವಾದ ಜೀವನು ಮುಕ್ತನಾಗುತ್ತಾನೆ. ಏಕೆಂದರೆ ಈ ಕಲೆಗಳ ಸಂಬಂಧ ಹೋಗುತ್ತದೆಯೋ ಆಗ ಅವನಿಗೆ ಕಡೆಯ ಮರಣ; ಇನ್ನು ಜನ್ಮವಿಲ್ಲ ಇದೇ ಮೋಕ್ಷ.

**ವಿಶೇಷ ವಿಷಯ** : ಈ ಮಂತ್ರದಲ್ಲಿ ಸಮುದ್ರ ಇತ್ಯೇವಂ ಎಂಬಲ್ಲಿ ಸಮುದ್ರ ಅತಿ ಏವಂ. ಪುರುಷೇ ಇತಿ ಏವಂ ಎಂದು ಸಪ್ತಮಿ ವಿಭಕ್ತ್ಯಂತವಾಗಿ ಪದವಿಭಾಗ ಮಾಡಬೇಕು; ಸಮುದ್ರ ಪುರುಷಃ ಎಂದು ಪ್ರಥಮಾ ವಿಭಕ್ತಿಯಾಗಿ

ಮಾಡಬಾರದು. ಏಕೆಂದರೆ, ನದಿಗಳು ಸಮುದ್ರದಲ್ಲಿ ಸೇರುತ್ತವೆಯೇ ವಿನಃ ಸಮುದ್ರ ಜಲಪರಮಾಣುಗಳಲ್ಲಿ ನದಿಜಲ ಪರಮಾಣುಗಳು ಐಕ್ಯವಾಗುವುದಿಲ್ಲ, ಸಮುದ್ರವೆಂಬುದು ಒಂದು ಅಗಾಧವಾದ ಸಂಗಮ. ಇಲ್ಲಿ ಅನೇಕ ನದಿಗಳು ಸೇರಿಹೋಗಿರುವು- ದರಿಂದ ಆಯಾ ನದಿಗಳ ನೀರುಗಳು ಪ್ರತ್ಯೇಕವಾಗಿದ್ದರೂ, ಸೂಕ್ಷ್ಮಬುದ್ಧಿಯಿಲ್ಲದ ಅಜ್ಞಜನರಿಗೆ ಅದು ಗೋಚರವಾಗು- ವುದಿಲ್ಲ, ಸಮುದ್ರವೇ ಆಯಿತೆಂದು ಹೇಳುತ್ತಾರೆ. ಹೇಗೆ ಕ್ಷೀರ, ನೀರು ಮೇಳವಾದರೆ ಹೇಗೆ ನೀರನ್ನು ಬೇರೆಯಾಗಿ ನೋಡಲು ಆಗುವುದಿಲ್ಲವೋ, ಆದರೂ ಅವು ಬೇರೆ ಬೇರೆಯಾಗಿ ಭಿನ್ನವಾಗಿಯೇ ಇರುತ್ತವೆಯೋ ಹಾಗೆಯೇ ಜಲಪರಮಾಣು ಕ್ಷೀರವಾಗುವುದಿಲ್ಲ ಕ್ಷೀರಪರಮಾಣು ಜಲವೂ ಆಗುವುದಿಲ್ಲ ಹಂಸ ಪಕ್ಷಿಯು ಮಾತ್ರ ಕ್ಷೀರವನ್ನು ಸ್ವೀಕರಿಸಿ, ಜಲಭಾಗವನ್ನು ಬೇರ್ಪಡಿಸಲು ಸಮರ್ಥವಾಗಿದೆ. ಹಾಗೆಯೇ ವಾಯುವು ಸಮುದ್ರದಲ್ಲಿಯ ನಾನಾ ನದಿಗಳ ಪೃಥಕ್ತ್ವವನು ತಿಳಿದು, ಸಮುದ್ರದಲ್ಲಿರುವ ಆಯಾಯ ನದಿಗಳ ಜಲವನ್ನು ಮೇಘರೂಪದಿಂದ ಆಯಾಯ ನದಿಗಳಿಗೆ ಸೇರುವಂತೆ ಮಾಡುತ್ತದೆ. ನದ್ಯಭಿಮಾನಿ ದೇವತೆಗಳೂ ಕೂಡ ತಮ್ಮಿಂದ ಅಭಿಮನ್ಯವಾದ ಜಲವನ್ನು ಸಮುದ್ರದಲ್ಲಿರುವಾಗ ತಿಳಿಯಲಾರರು :-

ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ । ವಾಯುಸ್ತು ತತ್ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ॥ ಹಾಗೆಯೇ ಜೀವನನ್ನು ಬಿಟ್ಟ ಷೋಡಶ ಕಲಾದೇವತೆಗಳು ಮತ್ತು ಮುಕ್ತ ಜೀವನೂ ಭಗವಂತನನ್ನು ಪ್ರವೇಶಿಸಿ, ತಮ್ಮ ತಮ್ಮ ನಾಮರೂಪಗಳನ್ನು ಬಿಡದೆಯೇ (ಅವುಗಳ ಸಹಿತವಾಗಿಯೇ) ಭಿನ್ನ ಭಿನ್ನರಾಗಿದ್ದು) ಆನಂದಾದಿಗಳನ್ನು ಅನುಭವಿಸುತ್ತಾರೆ. ಮುಕ್ತರು ಭಗವಂತನಲ್ಲಿ ಐಕ್ಯರಾಗುತ್ತಾರೆಂದರೆ ಸ್ಥಾನೈಕ್ಯವೆಂದರ್ಥವು: ಸ್ವರೂಪೈಕ್ಯವೆಂದು ಸರ್ವಥಾ ಅರ್ಥವಲ್ಲ, ಮೊದಲು ಸ್ವರೂಪತಃ ಭಿನ್ನವಾದ ವಸ್ತುಗಳು ಶತ ಸಹಸ್ರ ಪ್ರಯತ್ನ ಮಾಡಿದರೂ ಒಂದೇ ಸ್ವರೂಪವಾಗಲು (ಐಕ್ಯ) ಸಾಧ್ಯವೇ ಇಲ್ಲ. ಆದುದರಿಂದ ಈ ಮಂತ್ರದಲ್ಲಿ ಸಮುದ್ರ ಪುರುಷ ಎಂದು ಸಪ್ತಮ್ಯಂತ ಹಾಗೆಯೇ ಪದಚ್ಛೇದ ಮಾಡಬೇಕು.

2) ಇನ್ನು ಈ ಮಂತ್ರದಲ್ಲಿ ಭಿದ್ಯೇತೇ ಎಂಬ ಪದವಿದೆ. ಈ ಪದಕ್ಕೆ ಕೆಲವರು ನಾಶವಾಗುತ್ತವೆ ಎಂದು ಅರ್ಥಮಾಡಿ ನಾಮರೂಪಗಳು ನಾಶವಾಗಿ ನದಿಗಳು ಸಮುದ್ರವೇ ಆಗುತ್ತವೆ (ಸಮುದ್ರದಲ್ಲಿ ಅವುಗಳ ನಾಮ ರೂಪಗಳು ನಷ್ಟವಾಗಿ ಸಮುದ್ರದೊಂದಿಗೆ ಐಕ್ಯವಾಗುತ್ತವೆ) ಎಂದು ಅರ್ಥ ಮಾಡಿದ್ದಾರೆ. ಹೇಗೆಂದರೆ ಘಟೋ ಭಿನ್ನಃ ಎಂದರೆ ಘಟವು(ಮಡಿಕೆ) ನಾಶವಾಯಿತೆಂದೇ ಹೇಗೆ ಅರ್ಥವೋ, ಹಾಗೆಯೇ ಇಲ್ಲಿಯೂ ನಾಮರೂಪೇ ಭಿದ್ಯೇತೇ ಎಂದರೆ ನಾಮರೂಪಗಳು ನಾಶವಾಯಿತೆಂದೇ ಹೇಳಬೇಕು. ಆಗ ಸಮುದ್ರಃ ಏವ ಎಂದು ಪ್ರಥಮಾರ್ಥವನ್ನೇ ಹೇಳಬಹುದು. ಭಿದ್ಯೇತೇ ಎಂಬ ಪದಕ್ಕೆ ಭೇದಾರ್ಥವನ್ನು ಹೇಳಿ ಸಮುದ್ರ ಎಂಬ ಪದಕ್ಕೆ ಸಮುದ್ರ ಎಂದು ಸಪ್ತಮ್ಯರ್ಥ ಹೇಳುವುದು ಯುಕ್ತವಲ್ಲ ಎಂದು ಅವರ ವಾದ.

ಆದರೆ ಅವರ ವಾದವು ಸರಿಯಲ್ಲ, ಏಕೆಂದರೆ ಘಟೋ ಭಿನ್ನಃ ಎಂದರೆ ಘಟೋ ನಷ್ಟಃ ಎಂದು ಅರ್ಥವಲ್ಲ; ಘಟವು ಭಿನ್ನವಾಯಿತು; ಚೂರು ಚೂರಾಯಿತು ಅದರ ಅವಯವಗಳು ಬೇರೆ ಬೇರೆಯಾಯಿತು ಭಿನ್ನ ಭಿನ್ನವಾಯಿತು ಎಂದೇ – ಭಿನ್ನ ಪದಕ್ಕೆ ಅರ್ಥವು ಹಾಗೆ ಮಡಿಕೆಯು ಚೂರು ಚೂರಾದುದರಿಂದಲೇ ಘಟವು ನಷ್ಟವಾಯಿತು – ಹಾಳಾಯಿತು ಎಂದು ವ್ಯವಹಾರ. ಈ ನಷ್ಟವಾಯಿತು ಎಂಬ ಅರ್ಥವು ಭಿನ್ನ ಎಂಬ ಪದದ ಸಾಕ್ಷಾತ್ ಅರ್ಥವಲ್ಲ, ಭಿನ್ನವಾದ್ದರಿಂದ ನಾಶ ಎಂದು ಅರ್ಥಿಕಾರ್ಥವೇ ಆಗಿದೆ. ಆದ್ದರಿಂದ ಕೊಟ್ಟಿರುವ ದೃಷ್ಟಾಂತವು ವಿಷಮವಾಗಿದೆ. ಈ ವಾದವು ಸರಿಯಲ್ಲ.

ಹಾಗಾದರೆ ನಾಮರೂಪವೇ ಭಿದ್ಯೇತೇ ಎಂಬಲ್ಲಿಯೂ ಆರ್ಥಿಕಾರ್ಥವನ್ನು ಹೇಳಿ, ನಾಮರೂಪಗಳ ನಷ್ಟತ್ವವನ್ನು ಹೇಳಬಹುದಲ್ಲಾ – ಅಂದರೆ ಅದು ಸರಿಯಲ್ಲ, ಏಕೆಂದರೆ ಹೊಂದಿರುವ ಘಟಾದಿಗಳಂತೆ ನಾಮರೂಪಗಳು ಅವಯವ ವಿಭಾಗಗಳನ್ನು ಹೊಂದಿರುವ ದ್ರವ್ಯವಲ್ಲ; ಹಾಗಿದ್ದ ಪಕ್ಷದಲ್ಲಿ ಭಿನ್ನ ಘಟದಂ ತೇನಾಮ ರೂಪಗಳಿಗೆ ನಷ್ಟತ್ವವನ್ನು

ಹೇಳಬಹುದಾಗಿತ್ತು. ಅವುಗಳಿಗೆ ಅವಯವ ವಿಭಾಗಗಳು ಇಲ್ಲದಿದ್ದರೂ, ದ್ರವ್ಯ ಹೇಳುತ್ತೇವೆಂಬುದು ಅತಿ ಪ್ರಸಂಗವೇ ಆಗುತ್ತದೆ. ಆದ್ದರಿಂದ ಭಿದ್ಯೇತ ಎಂಬಲ್ಲಿ ಭೇದವೆಂಬ ಶಬ್ದಕ್ಕೆ ನಾಶವೆಂದು ಪದದ ಶಕ್ತಿಯಿಂದಾಗಲೀ, ಅರ್ಥಿಕಾರ್ಥನ್ನಾಗಲೀ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅದು ಪೃಥಕ್ ಪರವೇ ಆಗಿದೆ. ಸಮುದ್ರ ಎಂದು ಸಪ್ತಮ್ಯಂತವೇ ನ್ಯಾಯವಾದುದು ಎಂದು ತಿಳಿಯಬೇಕು. ಮುಂದಿನ ಮಂತ್ರದಲ್ಲಿ ಅರಾ ಇವ ರಥ ನಾಬೌ ಎಂಬಲ್ಲಿ ಈ ಆಶ್ರಯ ಆಶ್ರಯಿ ಭಾವ ಸಂಬಂಧವನ್ನೇ ಹೇಳುತ್ತದೆ. ಅದು ಭೇದ ಘಟಿತವಾಗಿಯೇ ಇದೆ. ಆದ್ದರಿಂದ ಈ ಮಂತ್ರದಲ್ಲಿಯೂ ಪುರುಷೇ ಎಂದು ಸಪ್ತಮ್ಯಂತವೇ ಉಪನಿಷತ್‌ಕಾರರಿಗೆ ಸಮ್ಮತವು.

ಪುರುಷಂ ಪ್ರಾಪ್ಯ ಅಸ್ತಂ ಗಚ್ಛಂತಿ – ಅಂದರೆ ಪುರುಷನನ್ನು ಹೊಂದಿ ಅಸ್ತಮಯವಾದ ಸೂರ್ಯನಂತೆ ಎಂದು ತಿಳಿಯಬೇಕು. ಸೂರ್ಯನು ಅಸ್ತನಾದರೆ ನಮ್ಮ ದೃಷ್ಟಿಗೆ ಅಗೋಚರನಾದರೂ, ಬೇರೆ ದೇಶಗಳಲ್ಲಿ ಇದ್ದೇ ಇರುತ್ತಾನೆ. ಹಾಗೆ ಕಲಾದೇವತೆಗಳು ಅಜ್ಞರ ದೃಷ್ಟಿಗೆ ಅದೃಶ್ಯರಾಗಿ ಪರಮಪುರುಷನಲ್ಲಿ ಆಶ್ರಿತರಾಗಿರುತ್ತಾರೆಂದು ತಿಳಿಯಬೇಕು.

ಮೋಕ್ಷದಲ್ಲಿ ಮುಕ್ತಜೀವನು ಪರಮಾತ್ಮನ ಆಶ್ರಯದಲ್ಲಿದ್ದು, ಅಂದರೆ ಅವನಿಂದ ಅತ್ಯಂತ ಭಿನ್ನರಾಗಿದ್ದು ಭೋಗಾದಿಗಳನ್ನು ಅನುಭವಿಸುತ್ತಾರೆಂದು ಅನೇಕ ಶ್ರುತಿ ಸ್ಮೃತಿಗಳು ಹೇಳುತ್ತವೆ. ಆದ್ದರಿಂದ ಈ ಮಂತ್ರಕ್ಕೆ ಅದ್ವೈತ ಪರವಾಗಿ ಅರ್ಥ ಮಾಡುವುದು ಸಾಧ್ಯವೇ ಇಲ್ಲ – ತೀರ ಅಪ್ರಾಮಾಣಿಕ ಮತ್ತು ಪ್ರಮಾಣವಿರುದ್ಧವು.

**ತದೇಷ ಶ್ಲೋಕಃ । ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ । ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ । ತಾನ್ ಹೋವಾಚ । ಏತಾವದೇವಾಹಮೇತತ್ಪರಂ ಬ್ರಹ್ಮ ವೇದ ನಾತಃ ಪರಮಸ್ತೀತಿ । ತೇ ತಮರ್ಚಯಂತಸ್ತ್ವಂ ಹಿ ನಃ ಪಿತಾ ಯೋ ಅಸ್ಮಾಕಮವಿದ್ಯಾಯಾಃ ಪರಂ ಪಾರಂ ತಾರಯಸೀತಿ । ನಮಃ ಪರಮ-ಋಷಿಭ್ಯಃ ನಮಃ ಪರಮಋಷಿಭ್ಯಃ ॥ 4 ॥**

*॥ ಇತಿ ಷಷ್ಠಃ ಪ್ರಶ್ನಃ ॥*

*॥ ಇತಿ ಷಟ್‌ಪ್ರಶ್ನೋಪನಿಷತ್ ಸಮಾಪ್ತಾ ॥*

ತತ್ರತತ್ರೋಕ್ತಾರ್ಥೇ ಏಷ ವಕ್ಷ್ಯಮಾಣಃ ಶ್ಲೋಕಃ ಸಮ್ಮತಿತ್ವೇನ ಭವತಿ । ರಥನಾಭೌ ಅರಾ ಇವ ಯಸ್ಮಿನ್ಪುರುಷೇ ಕಲಾಃ ಪ್ರತಿಷ್ಠಿತಾಃ ತೇ ವೇದ್ಯಂ ವೇದಿತವ್ಯಂ ಪುರುಷಂ ವಾಸುದೇವಂ ವೇದಯಥ, ಜಾನೀಧ್ವಂ ತತಶ್ಚ ಮೃತ್ಯುಃ ಸಂಸಾರೋ ವೋ ಯುಷ್ಮಾನ್ ಮಾ ಪರಿವ್ಯಥಾಃ ಮಾ ಪರಿವ್ಯಥಯತು । ಪುರುಷಾಜ್ಞಾನೇ ಸಂಸಾರವ್ಯಥಾ ಭವೇತ್ । ಸಾ ಭವತಾಂ ಮಾ ಭವತ್ವಿತಿ । ಏವಂ ಸ ಪಿಪ್ಪಲಾದಃ ತತ್ತ್ವಮುಪದಿಶ್ಯ ತಾನ್ ಭಾರದ್ವಾಜಾದೀನ್ ಪ್ರತ್ಯುವಾಚ । ಏತದುಕ್ತಲಕ್ಷಣಂ ಪರಂ ಬ್ರಹ್ಮಾಹಮೇತಾ-ವದುಕ್ತಮಾತ್ರಮೇವ ವೇದ ನಾತಃ ಪರಂ ಮಯಾ ವಿದಿತಮಸ್ತಿ । ಅಸ್ಮದಾದಯಃ ತದೇಕದೇಶವಿದ

ಏವ ನ ತು ಅಪರಿಮಿತವಿದ ಇತಿ ಭಾವಃ । ಏವಮುಪದಿಷ್ಟಾಸ್ತೇ ಮುನಯಃ ತಮಾಚಾರ್ಯ-ಮರ್ಚಯಂತಃ ಪ್ರಣಾಮಾದಿನಾ ಪೂಜಯಂತಃ ಇದಮೂಚುಃ । ಭಗವನ್ ತ್ವಂ ಹಿ ನಃ ಪಿತಾ ನಿರುಪಾಧಿಕೋಪಕಾರಕಃ ಕಥಂ ಯಃ ತ್ವಂ ಅಸ್ಮಾಕಂ ಅಸ್ಮಾನ್ ವಿದ್ಯಾಯಾಃ ಪರಂ ಪಾರಂ ತಾರಯಸಿ ಅತಾರಯಃ ಕೋ ಹಿ ನಾಮ್ಯೈವಮುಪಕುರ್ಯಾದಿತಿ । ಏವಮಾಖ್ಯಾಯಿಕಾಂ ಸಮಾಪ್ಯ ವೇದಪುರುಷಃ ಶಿಷ್ಯಶಿಕ್ಷಾರ್ಥಮಾಹ । ನಮಃ ಪರಮಋಷಿಭ್ಯಃ ಪಿಪ್ಪಲಾದಾದಿಭ್ಯ ಇತಿ । ದ್ವಿರ್ವಚನಮಾದರಾರ್ಥ-ಮಿತ್ಯಶೇಷಮಂಗಲಮಿತಿ ॥

*॥ ಇತಿ ಷಷ್ಠಪ್ರಶ್ನಪ್ರತಿವಚನಮ್ ॥*

*॥ ಇತಿ ಷಟ್ಪ್ರಶ್ನೋಪನಿಷತ್‌ಖಂಡಾರ್ಥಃ ಸಂಪೂರ್ಣಃ ॥*

**ಭಾವಾನುವಾದ** – ಪರಬ್ರಹ್ಮನಿಗೆ ಮುಕ್ತಾಶ್ರಯತ್ವವನ್ನು ತಿಳಿಸುವ ಶ್ರುತಿಯನ್ನು ಸಂವಾದ ರೂಪವಾಗಿ ಹೇಳಿ, ತನ್ನ ಅರ್ಥವನ್ನು ಉಪನಿಷತ್ತು ದೃಢೀಕರಿಸುತ್ತದೆ ಎಂದು ಪಿಪ್ಪಲಾದರು ಹೇಳುತ್ತಾರೆ ಷೋಡಶಕಲಾ ದೇವತೆಗಳು ಪರಮಾತ್ಮನಲ್ಲಿ ಹೇಗೆ ಆಶ್ರಿತರಾಗಿದ್ದಾರೆಯೋ, ರಥದ ಗಾಲಿಯಲ್ಲಿರುವ ಅರೆಗಾಲು ಪಟ್ಟಿಗಳು ಹೇಗೆ ಚಕ್ರದ ಗುಂಭದಲ್ಲಿ ಸೇರಿಕೊಂ-ಡಿವೆಯೋ ಹಾಗೆ ಇದ್ದಾರೆ. ಎಲ್ಲಾ ಮುಕ್ತರಿಗೂ ಅವನೇ ಆಶ್ರಯ, ಮುಮುಕ್ಷುಗಳು ಈ ವಾಸುದೇವನನ್ನು ಯಥಾರ್ಥ-ವಾಗಿ ತಿಳಿದುಕೊಳ್ಳಲೇಬೇಕು. ಆದ್ದರಿಂದ ಎಲೈ ಶಿಷ್ಯರೇ, ಇದನ್ನು ತಿಳಿದುಕೊಂಡು ಸಂಸಾರ ಕ್ಲೇಶವನ್ನು ಹೋಗಲಾಡಿಸಿ-ಕೊಳ್ಳಿರಿ ಎಂದು ಶ್ರುತಿ ಹೇಳುತ್ತದೆ ಎಂದು ಪಿಪ್ಪಲಾದರು ಭಾರದ್ವಾಜಾದಿಗಳನ್ನು ಕುರಿತು ತಮ್ಮ ಉಪದೇಶವನ್ನು ಉಪಸಂಹಾರ ಮಾಡಿದರು. ಶಿಷ್ಯರುಗಳು ತತ್ತ್ವೋಪದೇಶ ಮಾಡಿದ ಪೂಜ್ಯರಾದ ಗುರುಗಳಿಗೆ ಪ್ರಣಾಮಾದಿಗಳನ್ನು ಅರ್ಪಿಸಿ ಹೇಳುತ್ತಾರೆ :– ಹೇ ಪೂಜ್ಯರಾದ ಗುರುವರ್ಯರೇ, ನೀವೇ ನಮಗೆ ತಂದೆಯು, ನಮ್ಮನ್ನು ರಕ್ಷಿಸಿರುವಿರಿ; ಹೇಗೆ ನಾವಿಕನು ನಾವೆಯಿಂದ ಜನರನ್ನು ನದಿಯ ಪ್ರವಾಹದಿಂದ ದಾಟಿಸುತ್ತಾನೆಯೋ, ಹಾಗೆ ತಾವು ಈ ಅವಿದ್ಯಾರೂಪವಾದ ಸಂಸಾರ ಸಾಗರವನ್ನು ದಾಟಲು ಶ್ರೇಷ್ಠತಮವಾದ ಉಪಾಯವನ್ನು ತಿಳಿಸಿ, ನಮ್ಮನ್ನು ಉದ್ಧಾರ ಮಾಡಿದಿರಿ. ಇಂತಹ ಪರೋಪಕಾರವನ್ನು ಯಾರು ತಾನೆ ಮಾಡಬಲ್ಲರು? ತಮಗೆ ಮತ್ತೊಮ್ಮೆ ನಮಸ್ಕಾರವು.

ಈ ಆಖ್ಯಾಯಿಕೆಯನ್ನು ಸಮಾಪ್ತಿ ಮಾಡಿ, ವೇದಪುರುಷನು ಶಿಷ್ಯರ ಶಿಕ್ಷಣಾರ್ಥವಾಗಿ ನಮಃ ಪರಮ ಋಷಿಭ್ಯಃ ನಮಃ ಪರಮ ಋಷಿಭ್ಯಃ ಎಂದು ಉಪನಿಷತ್ತನ್ನು ಉಪಸಂಹಾರ ಮಾಡಿದ್ದಾನೆ. ॥ 4 ॥

**ವಿಶೇಷ ವಿಷಯ:** ಅತ್ಯಮೌಲ್ಯವಾದ ಪರವಿದ್ಯಾ ವಿಷಯಕವಾದ ಭಗವತ್ತತ್ವವನ್ನು ಉಪದೇಶಿಸಿ ಸಂಸಾರಭಯ-ದಿಂದ ಪಾರು ಮಾಡುವ ಗುರುಗಳೂ ತಂದೆಗೆ ಸಮನರು.

1) ಜನಿತಾ ಚ ಉಪನೀತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ ।
ಅನ್ನದಾತಾ ಭಯಸ್ತ್ರಾತಾ ಪಂಚೈತೇ ಪಿತರಃ ಸ್ಮೃತಃ ॥

2) ಪಿತಾ ಮಾತಾ ತಥಾ ಭ್ರಾತಾ ಸರ್ವೇ ಸಂಸಾರಹೇತವಃ ।
ಗುರುರೇಕಃ ಸದಾ ಸೇವ್ಯಃ ಸಂಸಾರೋದ್ಧಾರಣಕ್ಷಮಃ ॥

ಹೀಗೆ ಜೀವೋತ್ತಮರಾದ ಶ್ರೀ ಮುಖ್ಯಪ್ರಾಣದೇವರೇ ಸಕಲ ತತ್ತ್ವಾಭಿಮಾನಿಗಳಲ್ಲಿ ನಿಂತು, ಜಗತ್ತಿನಲ್ಲಿ ಚಿತ್ರವಿಚಿತ್ರ ವ್ಯಾಪಾರಗಳನ್ನು ಮಾಡಿ, ಮಾಡಿಸುತ್ತಾರೆ ಅವರಿಗೂ ನಿಯಾಮಕನಾಗಿ ಅವರಲ್ಲಿ ಅವಿಶೇಷತಃ ಸನ್ನಿಧಾನನಾದ, ಸಕಲ ಗುಣಪರಿಪೂರ್ಣನೂ, ಸರ್ವದೋಷ ಗಂಧವಿದೂರನೂ, ಆದ ಭಗವನ್ನಾರಾಯಣನು ಜಗಜ್ಜನ್ಮಾದಿ ಕರ್ತನು, ಮುಕ್ತಾಶ್ರಯನು ಅತ ಏವ ಸಕಲ ಜೀವ ಜಡಾತ್ಮಕವಾದ ಪ್ರಪಂಚದ ಅತ್ಯಂತ ಭಿನ್ನನೆಂದು ನಿಸ್ಸಂಶಯವಾಗಿ ತಿಳಿದುಕೊಂಡು, ಶ್ರವಣ, ಮನನ, ನಿಧಿ ಧ್ಯಾಸನಾದಿಗಳಿಂದ, ಪರಮೇಶ್ವರನ ದಿವ್ಯ ಪ್ರಸಾದವನ್ನು ಸಕಲ ಸಜ್ಜನರೂ ಹೊಂದಬೇಕೆಂಬುದೇ ಈ ಉಪನಿಷತ್ತಿನ ಸಾರವು. ಇದೇ ಸಕಲ ಸಚ್ಛಾಸ್ತ್ರಗಳ ಮುಖ್ಯ ಸಂದೇಶವಾಗಿದೆ.

॥ ಇತಿ ಷಷ್ಠಪ್ರಶ್ನಃ ॥

**ನಮೋ ನಮೋಽಸ್ತು ಹರಯೇ ಪ್ರೇಷ್ಠಪ್ರೇಷ್ಠತಮಾಯ ತೇ ।**
**ಪರಮಾನಂದಸಂದೋಹಸಾಂದ್ರಾನಂದವಪುಷ್ಮತೇ ॥**

**ವಿ.ಸೂ –** ರಾಯರ ಖಂಡಾರ್ಥಕ್ಕೆ ಅಂತಿಮ ಮಂಗಳಶ್ಲೋಕ ಉಪಲಬ್ದವಿಲ್ಲ, ಶ್ರೀಮದಾಚಾರ್ಯರ ಭಾಷ್ಯ ಮಂಗಳಶ್ಲೋಕವನ್ನೇ ಕೊಟ್ಟು ಗ್ರಂಥ ಉಪಸಂಹಾರಮಾಡಿದೆ.

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★